ಸಂಸ್ಕೃತ - ಸಂಸ್ಕೃತಿ - ಸಂಪತ್ತು ಪುಸ್ತಕ ಮಾಲೆ ೧

# ಆದಿಕವಿ ವಾಲ್ಮೀಕಿ

ಪ್ರೊ|| ಎಸ್.ಕೆ.ರಾಮಚಂದ್ರರಾವ್





ಎಂ.ಪಿ. ಬಿರ್ಲಾ ಪ್ರತಿಷ್ಠಾನ
ಬೆಂಗಳೂರು ಕೇಂದ್ರ
ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - 560 001

ಸಂಸ್ಕೃತ - ಸಂಸ್ಕೃತಿ - ಸಂಪತ್ತು ಪುಸ್ತಕ ಮಾಲೆ ೧

# ಆದಿಕವಿ ವಾಲ್ಮೀಕಿ

ಪ್ರೊ|| ಸಾ.ಕೃ.ರಾಮಚಂದ್ರರಾವ್



ಎಂ.ಪಿ. ಬಿರ್ಲಾ ಪ್ರತಿಷ್ಠಾನ

ಬೆಂಗಳೂರು ಕೇಂದ್ರ

ರೇಸ್‌ಕೋರ್ಸ್ ರಸ್ತೆ, ಬೆಂಗಳೂರು - 560 001

**Aadikavi Valmeeki** - A book on the poet Valmeek
Published by M.P. Birla Foundation, Bangalore Kendr
Race Course Road, Bangalore - 560 001.

Typeset : Viswas Services

Printed at : The Bangalore Press

Pages : 65

First Edition : April - 2000.



Price : Rs.

For copies contact :
PUSTAK BHARATHI
Bharatiya Vidya Bhavan
Race Course Road, Bangalore - 560 001.

# ಸಂಸ್ಕೃತ - ಸಂಸ್ಕೃತಿ - ಸಂಪತ್ತು ಪುಸ್ತಕ ಮಾಲೆ

ಎಂ.ಪಿ. ಬಿರ್ಲಾ ಪ್ರತಿಷ್ಠಾನದ ಬೆಂಗಳೂರು ಕೇಂದ್ರವು ಇದೊಂದು ಕನ್ನಡ ಪುಸ್ತಕಮಾಲೆಯನ್ನು ಆರಂಭಿಸಿದೆ. ಭಾರತೀಯವೇ ಎಂಬಂಥ ಸಾಂಸ್ಕೃತಿಕ ಮೌಲ್ಯಗಳು ಜನರಲ್ಲಿ ಬಿತ್ತರಗೊಳ್ಳಬೇಕೆಂಬುದು ಉದ್ದೇಶ. ವಿದ್ವಜ್ಜನರಿಗೆ ಮಾತ್ರ ಎಟುಕಬಲ್ಲ ಉದ್ಗ್ರಂಥಗಳು ಅನೇಕ ಇವೆ; ಇನ್ನೂ ಹೊರಬರುತ್ತಿವೆ. ಆದರೆ ಜನಸಾಮಾನ್ಯರ ಅಗತ್ಯವನ್ನೂ ಅಪೇಕ್ಷೆಯನ್ನೂ ಪೂರೈಸುವ ಕಿರುಹೊತ್ತಗೆಗಳನ್ನು ಪ್ರಕಟಿಸುವುದು ಈ ಪ್ರತಿಷ್ಠಾನದ ಸಂಕಲ್ಪ. ಎಲ್ಲರ ಕಿಸೆಗೂ ಒದಗುವ ಬೆಲೆಯಲ್ಲಿ, ಎಲ್ಲರ ಕಿಸೆಯೊಳಗೆ ಹೋಗುವ ಗಾತ್ರದಲ್ಲಿ ಈ ಪುಸ್ತಕಗಳಿರುತ್ತವೆ.

ಗಾತ್ರ ಕಿರಿದಾದರೂ, ಪ್ರಾಮಾಣಿಕತೆಯಲ್ಲಾಗಲಿ ಪ್ರಯೋಜನದಲ್ಲಾಗಲಿ ಕೊರತೆಯೇನು ಇರದಂತೆ ಎಚ್ಚರಿಕೆ ವಹಿಸಲಾಗುವುದು.

ಮೊದಲ ಮಾಲೆ ಸಂಸ್ಕೃತ ಭಾಷೆಯಲ್ಲಿರುವ ಸಾಂಸ್ಕೃತಿಕ ಸಂಪತ್ತನ್ನು ಕುರಿತದ್ದು. ಇದರಲ್ಲಿ ಐದಾರು ಸಾವಿರ ವರ್ಷಗಳಿಂದ ಬೆಳೆದು ಬಂದು, ನಾಡಿನ ಎಲ್ಲ ಪ್ರಾಂತಗಳ ಬದುಕು ಬರಹಗಳಿಗೆ ಪ್ರೇರಣೆಯನ್ನೂ ಸಾಮಗ್ರಿಯನ್ನೂ ಒದಗಿಸಿ, ಜನತೆಯ ಸಂಸ್ಕೃತಿಗೆ ಒತ್ತಾಸೆಯಾಗಿ, ಸಂಸ್ಕೃತ ವಾಙ್ಮಯದ ವಿಶಿಷ್ಟ ಘಟ್ಟಗಳನ್ನು ಗುರುತಿಸಲು ನೆರವಾಗುವ ಸಣ್ಣ ಸಣ್ಣ

ಪುಸ್ತಕಗಳು ಬೆಳಕು ಕಾಣುತ್ತವೆ, ಬಿಂದುವಿನಲ್ಲಿ ಸಿಂಧು ಎಂಬಂತೆ, ಹನಿಯಲ್ಲಿ ಹೊನಲು ಎಂಬಂತೆ.

ವೈದಿಕ ಸಾಹಿತ್ಯ, ರಾಮಾಯಣ, ಭಾರತ, ಭಾಗವತಗಳಲ್ಲದೆ ಅವುಗಳನ್ನಾಧರಿಸಿ ಅಥವಾ ಸ್ವತಂತ್ರವಾಗಿ ಮೈದಳೆದ ಕೃತಿಗಳ ಪರಿಚಯ ಈ ಮಾಲೆಯಿಂದ ದೊರಕುತ್ತದೆ. ಸಂಸ್ಕೃತದಲ್ಲೇ ಇರುವ ಮಹಾಕಾವ್ಯಗಳು, ಖಂಡಕಾವ್ಯಗಳು ಚಿತ್ರಕಾವ್ಯಗಳು, ಗದ್ಯಕಾವ್ಯಗಳು, ಹಲವು ಪ್ರಕಾರಗಳ (ವೈದಿಕ, ಜೈನ, ಬೌದ್ಧ) ಶಾಸ್ತ್ರ ಸಾಹಿತ್ಯ, ಆಗಮ, ದರ್ಶನ ಪ್ರಬಂಧಗಳು, ತಂತ್ರ ಗ್ರಂಥಗಳು ಸುಭಾಷಿತ ಮೊದಲಾದುವನ್ನು ತಿಳಿಯಾದ ನುಡಿಯಲ್ಲಿ, ಲಲಿತವಾದ ಶೈಲಿಯಲ್ಲಿ ಜನಸಾಮಾನ್ಯರಿಗೆ ಒದಗಿಸಿಕೊಡುವ ಪ್ರಯತ್ನ ಮಾಡಲಾಗುತ್ತದೆ.

ಸಂಸ್ಕೃತ - ಸಂಸ್ಕೃತಿ - ಸಂಪತ್ತು ಮಾಲೆಯ ಮೊದಲ ಹೂವಾಗಿ ಆದಿಕವಿ ವಾಲ್ಮೀಕಿಯನ್ನು ಕುರಿತಂತೆ ಒಂದು ಹೊತ್ತಗೆ ಬರುತ್ತಿದೆ. ಮುಂದೆ ಬರಲಿರುವುದು ವಾಲ್ಮೀಕಿಯ ನಂತರ, ಕಾಳಿದಾಸನಿಗೆ ಮೊದಲು, ಮಹಾಕವಿಯಾಗಿ ಮೆರೆದ ಅಶ್ವಘೋಷನ ಸೌಂದರನಂದ ಕಾವ್ಯವನ್ನು ಕುರಿತದ್ದು; ಅವನದ್ದೆ ಇನ್ನೊಂದು ಮಹಾಕಾವ್ಯವಾದ ಬುದ್ಧಚರಿತವನ್ನೂ ಪರಿಚಯಮಾಡಿಕೊಡಲಾಗುತ್ತದೆ. ಅನಂತರ ಜಯದೇವಕವಿಯ ಗೀತಗೊವಿಂದವನ್ನು ಕುರಿತು, ಭಾಸನ ನಾಟಕಗಳನ್ನು ಕುರಿತು, ಭರತಮುನಿಯ ನಾಟ್ಯಶಾಸ್ತ್ರವನ್ನು ಕುರಿತು, ಅಲಂಕಾರ ಶಾಸ್ತ್ರದ ವಿವಿಧ ಪ್ರಸ್ಥಾನಗಳನ್ನು ಕುರಿತು, ಭರ್ತೃಹರಿಯ ವಾಕ್ಯಪದೀಯವನ್ನು ಕುರಿತು, ದಿಙ್ನಾಗನ ಕುಂದಮಾಲೆಯನ್ನು ಕುರಿತು, ಕುಮಾರದಾಸನ ಜಾನಕೀಹರಣವನ್ನು ಕುರಿತು, ತಂತ್ರಶಾಸ್ತ್ರವನ್ನು ಕುರಿತು, ಹೀಗೆ ಮಾಲೆ ಮುಂದುವರಿಯುತ್ತದೆ.

ಈ ಸಾಹಿತ್ಯ ಸೇವಾಕಾರ್ಯವನ್ನು ಮಾಡಬೇಕೆಂದು ಅಪೇಕ್ಷಿಸಿ, ಪ್ರೋತ್ಸಾಹಿಸಿ ಹರಸಿರುವವರು ಎಂ.ಪಿ. ಬಿರ್ಲಾ ಪ್ರತಿಷ್ಠಾನದ ಮುಖ್ಯಸ್ಥರಾದ ಶ್ರೀಮತಿ ಪ್ರಿಯಂವದಾ ದೇವಿ ಬಿರ್ಲಾ.

ಈ ಯೋಜನೆಯನ್ನು ನಡೆಸಲು ಮಹನೀಯರಾದ ಪ್ರೊ||ಎಸ್.ಕೆ.ರಾಮಚಂದ್ರರಾಯರು ಒಪ್ಪಿಕೊಂಡದ್ದು ನಮ್ಮ ಭಾಗ್ಯ. ಇವರು ಬಹುಮುಖ ಪ್ರತಿಭೆಯುಳ್ಳವರು.

ವೇದಾವಾಙ್ಮಯ ಸಂಸ್ಕೃತ ಸಾಹಿತ್ಯ, ಕನ್ನಡ - ಇಂಗ್ಲೀಷು ಭಾಷೆಗಳ ಸಾಹಿತ್ಯ, ಎಲ್ಲವನ್ನೂ ಆಳವಾಗಿ ಅಧ್ಯಯನ ಮಾಡಿದಾರೆ. ಇವರು ನಿಜಕ್ಕೂ ವಿದ್ಯಾವಾರಿಧಿಯೆ.

ಬೆಂಗಳೂರು ಪ್ರೆಸ್ಸಿನ ಶ್ರೀ ಎಚ್.ಆರ್. ಅನಂತ್, ವಿದ್ಯಾಭವನದ ನನ್ನ ಸಹೋದ್ಯೋಗಿಗಳು ಶ್ರೀ ಎಚ್.ಎನ್. ಸುರೇಶ್, ಶ್ರೀ ದತ್ತಾತ್ರಿ ಇವರಿಗೆಲ್ಲ ಆಭಾರಿ. ಓದುಗರು ಇಂಥ ಉತ್ತಮ ಕೃತಿಗಳಿಂದ ಉಪಯೋಗ ಪಡೆಯಬೇಕು ಎಂಬುದೇ ಪ್ರತಿಷ್ಠಾನದ ಆಶಯ.

ಮತ್ತೂರು ಕೃಷ್ಣಮೂರ್ತಿ
ಪ್ರಾದೇಶಿಕ ನಿರ್ದೇಶಕರು
ಎಂ.ಪಿ. ಬಿರ್ಲಾ ಪ್ರತಿಷ್ಠಾನ
ಬೆಂಗಳೂರು.

## ಲೇಖಕರು

## ಪ್ರೊ॥ ಸಾ.ಕೃ. ರಾಮಚಂದ್ರರಾವ್

ವಿದ್ಯಾಲಂಕಾರ, ಶಾಸ್ತ್ರಚೂಡಾಮಣಿ, ಸಂಗೀತಕಲಾರತ್ನ, ವೇದಾಂತ-ನಿಧಿ ಪ್ರೊ॥ ಸಾಲಿಗ್ರಾಮ ಕೃಷ್ಣ ರಾಮಚಂದ್ರರಾಯರು ಪಂಡಿತರ ಮನೆತನಕ್ಕೆ ಸೇರಿದವರು. ಎಳವೆಯಿಂದಲೇ ಸಂಸ್ಕೃತ ಸಾಹಿತ್ಯದ ಅಧ್ಯಯನಕ್ಕೆ ತೊಡಗಿ ಮುಂದೆ ಅಲಂಕಾರಶಾಸ್ತ್ರ, ವೇದಾಂತ ವಿಭಾಗಗಳಲ್ಲಿ ಪ್ರಾವೀಣ್ಯವನ್ನು ಗಳಿಸಿದರು. ಪ್ರಾಕೃತ, ಪಾಳಿ, ಟಿಬೆಟನ್, ಅಪಭ್ರಂಶ ಭಾಷೆಗಳ ಪರಿಚಯುವನ್ನೂ ಪಡೆದುಕೊಂಡು ಅಲ್ಲಿನ ಮೌಲಿಕಗ್ರಂಥಗಳನ್ನು, ಮೂಲದಲ್ಲೇ ಅಧ್ಯಯನ ಮಾಡಿದವರು. ವೈದಿಕ ಸಾಹಿತ್ಯ, ಜೈನ, ಬೌದ್ಧ ಸಾಹಿತ್ಯ, ಸಿದ್ಧ ಸಂಪ್ರದಾಯ, ಆಗಮ, ತಂತ್ರಶಾಸ್ತ್ರ ಇವುಗಳಲ್ಲೂ ಧಾರಾಳವಾಗಿ ಕೈಯಾಡಿಸಿದ್ದಾರೆ.

ವೃತ್ತಿಯಲ್ಲಿ ಮನಃಶಾಸ್ತ್ರದ ಪ್ರಾಧ್ಯಾಪಕರಾಗಿದ್ದವರು (NIMHANS ಮತ್ತು ಬೆಂಗಳೂರು ವಿಶ್ವವಿದ್ಯಾನಿಲಯಗಳಲ್ಲಿ); ಪ್ರಸ್ತುತ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿವೇಕಾನಂದ ಸಂದರ್ಶಕ ಪ್ರಾಧ್ಯಾಪಕರಾಗಿದ್ದಾರೆ.

ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಅನೇಕ ಉದ್ಗ್ರಂಥಗಳನ್ನು ರಚಿಸಿ ಪ್ರಸಿದ್ಧರಾದವರು. ಸಂಸ್ಕೃತದಲ್ಲಿ 'ಪೌರವವಿಜಯ'ವೆಂಬ

ನಾಟಕವೊಂದನ್ನೂ ಪಾಳಿಭಾಷೆಯಲ್ಲಿ 'ವಿಸುದ್ಧಿಮಗ್ಗ ವಿಭಾವನೀ' ಎಂಬ ಟೀಕಾಗ್ರಂಥವನ್ನೂ ಬರೆದಿದ್ದಾರೆ.

ಕರ್ನಾಟಕ ಸಂಗೀತದಲ್ಲಿ ಹೆಚ್ಚಿನ ಒಲವು; ವೀಣೆಯನ್ನು ಅಭ್ಯಾಸ ಮಾಡಿದ್ದಾರೆ. ಚಿತ್ರಕಾರರು, ಶಿಲ್ಪಿಗಳು; ಭರತಮುನಿಯ ನಾಟ್ಯಶಾಸ್ತ್ರ ವಿಚಾರವಾಗಿ ಅಧಿಕಾರದಿಂದ ಹೇಳಬಲ್ಲವರು. ತಮ್ಮ ಕಲಾಕೃತಿಗಳ ಪ್ರದರ್ಶನಗಳನ್ನೂ ನಡೆಸಿದ್ದಾರೆ; ಸಂಗೀತ ಸಮ್ಮೇಳನಗಳ ಅಧ್ಯಕ್ಷತೆಯನ್ನು ವಹಿಸಿದ್ದಾರೆ.

ಕರ್ನಾಟಕ ಸರ್ಕಾರದಿಂದ 1986ರಲ್ಲಿ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದುಕೊಂಡವರು. ಸಂಗೀತನೃತ್ಯ ಅಕಾಡೆಮಿ, ಲಲಿತಕಲಾ ಅಕಾಡೆಮಿ ಮೊದಲಾದ ಸಂಸ್ಥೆಗಳಿಂದ ಪುರಸ್ಕೃತರು. Encyclopaedia Britannica, ಕನ್ನಡ ವಿಶ್ವಕೋಶ ಇವರಿಂದ ಪ್ರಬಂಧಗಳನ್ನು ಬರೆಯಿಸಿ ಬಳಸಿಕೊಂಡಿವೆ.

ಪ್ರಸ್ತುತ ಅವರು ಇಡೀ ಋಗ್ವೇದಕ್ಕೆ ಸಂಪ್ರದಾಯದ ಅರ್ಥವನ್ನು ನಿರೂಪಿಸುವ ಕೆಲಸದಲ್ಲಿ ತೊಡಗಿದ್ದು, 'ಋಗ್ವೇದದರ್ಶನ' ಎಂಬ ಮೂವತ್ತು ಸಂಪುಟಗಳ ಮಾಲೆಯನ್ನು ಇಂಗ್ಲೀಷಿನಲ್ಲಿ ಸಿದ್ಧಪಡಿಸುತ್ತಿದ್ದಾರೆ; ಈಗ ಈ ಮಾಲೆಯ ಐದು ಸಂಪುಟಗಳು ಕಲ್ಪತರು ರಿಸರ್ಚ್ ಅಕಾಡೆಮಿಯ ಮೂಲಕ ಪ್ರಕಟವಾಗಿವೆ.

# ಲೇಖಕನ ಮೊದಲ ಮಾತು

ಭಾರತೀಯವೆನ್ನಬಹುದಾದ ಸಾಂಸ್ಕೃತಿಕ ಮೌಲ್ಯಗಳು ಮೊಟ್ಟಮೊದಲಿಗ ಗ್ರಂಥಗಳು, ಪುರಾಣಗಳು, ಕಾವ್ಯಗಳು, ನಾಟಕಗಳು, ಹೀಗೆ ಹಲವು ಪ್ರಕಾರಗಳಲ್ಲಿ ಸಂಸ್ಕೃತ ವಾಙ್ಮಯವು ನಮ್ಮ ಸಾಂಸ್ಕೃತಿಕ ಸಂಪತ್ತಿಗೆ ಹಿಡಿದ ಕೈಗನ್ನಡಿಯಾಗಿದೆ ಯುಗಧರ್ಮದಿಂದಾಗಿ ಈ ವಾಙ್ಮಯದ ನೇರ ಪರಿಚಯ ಬಹುಜನರ ಪಾಲಿಗ ಇಲ್ಲವಾಗಿದೆ. ಸೊಗಸಾದ ಸಾರಸ್ವತ ಸಂಪತ್ತು ನಮ್ಮಲ್ಲಿ ಇದೆಯೆಂಬ ಅರಿವು ಕೂಡ ಮರೆಯಾಗತೊಡಗಿದೆ.

ಈ ಕೊರೆಯನ್ನರಿತು ಶ್ರೀ ಎಂ.ಪಿ. ಬಿರ್ಲಾ ಪ್ರತಿಷ್ಠಾನದ ಬೆಂಗಳೂರು ಶಾಖೆಯು ಸಾಂಸ್ಕೃತಿಕ ಮೌಲ್ಯಗಳ ಸರಳ ಪರಿಚಯವನ್ನು ಒದಗಿಸುವ ಸಲುವಾಗಿ ಸಂಸ್ಕೃತ ಸಾಹಿತ್ಯದ ಉತ್ತಮ ಕೃತಿಗಳ ಕಿರುಪರಿಚಯವನ್ನು ಕನ್ನಡದಲ್ಲಿ ನೀಡಲು ಇದೊಂದು ಪುಸ್ತಕಮಾಲೆಯನ್ನು ಆರಂಭಿಸಿದೆ. ಇದರಿಂದ ಕನ್ನಡ ಜನತೆಗೆ ಒಳಿತಾಗುವುದರಲ್ಲಿ ಸಂಶಯವೇನಿರದು. ಈ ಒಂದು ಅಗತ್ಯವಾದ ಕೆಲಸದಲ್ಲಿ ನನ್ನನ್ನು ಉಜ್ಜುಗಿಸಿ ಈ ಪ್ರತಿಷ್ಠಾನದ ಬೆಂಗಳೂರು ಶಾಖೆಯ ಹಿರಿಯರಾದ, ನನ್ನ ಸನ್ಮಾನ್ಯ ಮಿತ್ರರಾದ, ಶ್ರೀ ಮತ್ತೂರು ಕೃಷ್ಣಮೂರ್ತಿಯವರು ನನಗೆ ಉಪಕಾರ ಮಾಡಿದ್ದಾರೆ. ಅವರಿಗೂ, ಅವರೊಂದಿಗೆ ಅದೇ ಕಾಯಕದಲ್ಲಿ ತೊಡಗಿರುವ ನನ್ನ ಇನ್ನೊಬ್ಬ ಮಿತ್ರರು ಶ್ರೀ ಎಚ್.ಎನ್. ಸುರೇಶ್ ಅವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಇವರ ನೆರವಿಲ್ಲದೆ, ಪ್ರೀತಿಯ ಒತ್ತಾಸೆಯಿಲ್ಲದೆ ಈ ಭಾರವನ್ನು ನಾನು ಹೊರುವುದಾದರೂ ಹೇಗೆ?

ಸಂಸ್ಕೃತ ಭಾಷೆಗೂ ಅದರಲ್ಲಿರುವ ಸಾಹಿತ್ಯಕ್ಕೂ ಎಳವೆಯಿಂದಲೂ ಮನಸೋತಿರುವವನು ನಾನು; ಇದರಿಂದ ಧಾರಾಳವಾಗಿ ಉಪಕೃತನಾಗಿರುವುದೂ ಹೌದು. ಹೀಗಿರುವಾಗ ಇದೊಂದು ಅವಕಾಶ ಒದಗಿದಾಗ ಒಪ್ಪಿಕೊಳ್ಳದಿರುವುದು ಹೇಗೆ? ಸ್ವಸಂತೋಷಕ್ಕೇ ಇದನ್ನು ಮಾಡುತ್ತಿರುವುದಾಂದರೂ, ಇದರಿಂದ ಸಂಸ್ಕೃತ ವಾಙ್ಮಯದ ಸ್ವಾರಸ್ಯವನ್ನೂ ಸಾರ್ಥಕತೆಯನ್ನೂ ಕೆಲವರಾದರೂ ಅರಿಯುವಂತಾದರೆ ನಾನು ಕೃತಾರ್ಥ.



ರಾಮಲಕ್ಷ್ಮಣಸೀತೆ

# ಆದಿಕವಿ ವಾಲ್ಮೀಕಿ

## (೧) ಜಾನಪದ ಮೂಲ

ಸುಮಃ ಸರ್ವೋಪಜೀವ್ಯಂ ತಂ ಕವೀನಾಂ ಚಕ್ರವರ್ತಿನಂ ।
ಯಸ್ಯೇಂದು ಧವಳೈಃ ಶ್ಲೋಕೈರ್ಭೂಷಿತಾ ಭುವನತ್ರಯೀ॥

ವಿಶ್ವದ ಸರ್ವೋತ್ಕೃಷ್ಟ ಗ್ರಂಥಗಳಲ್ಲಿ ವಾಲ್ಮೀಕಿಯ ರಾಮಾಯಣವು ಒಂದೆಂದು ಹೆಸರಾಗಿದೆ. ನಮ್ಮ ದೇಶದಲ್ಲಂತೂ ಅದರ ವ್ಯಾಪ್ತಿ, ಪ್ರಭಾವ ಆದ್ಯಂತ ವಿಸ್ತೃತ. ಎಲ್ಲ ಸಾಹಿತ್ಯಕ್ಕೂ ಅದೇ ಮೂಲ; ಎಲ್ಲ ಧರ್ಮಕ್ಕೂ ಅದೇ ಆಕರ.

ಕ್ರಿಸ್ತಪೂರ್ವ ಹಲವಾರು ಶತಮಾನಗಳಿಗೂ ಮುಂಚಿನಿಂದ ಇಂದಿನವರಿಗೆ ರಾಮನ ವ್ಯಕ್ತಿತ್ವ ದೇಶದ ಜೀವನದಲ್ಲಿ ಬಹುಮುಖವಾದ ಸ್ಫೂರ್ತಿ ಕೊಡುತ್ತಿರುವುದು ರಾಮಾಯಣದ ಆಧಾರದ ಮೇಲೆ. ವಿವಿಧ ಪ್ರಾಂತ್ಯಗಳಲ್ಲಿ, ವಿಭಿನ್ನ ಭಾಷೆಗಳಲ್ಲಿ ರಾಮನ ಕಥೆಯು ಅಸಂಖ್ಯ ವಿಧದಲ್ಲಿ ಪ್ರಕೀರ್ತಿತವಾಗಿದೆ. ಕಥೆ, ಕವನ, ಚಿತ್ರ, ಶಿಲ್ಪ, ಸಂಗೀತ, ನರ್ತನ, ನಾಟಕ, ಭಕ್ತಿ, ದರ್ಶನ, ನಿತ್ಯಕರ್ಮ, ಸಾಂಸಾರಿಕ ಜೀವನ - ಎಲ್ಲದರಲ್ಲೂ ರಾಮನ ಪ್ರಭಾವ ಅಮಿತವಾಗಿ ಬಿದ್ದಿದೆ. ರಾಮನಾಮದ ಮಹಿಮೆ ಪುರಾಣಗಳಿಂದ ಹಿಡಿದು ಗಾಂಧೀಜಿಯವರೆಗೆ ಎಲ್ಲ ಸಂತರಿಂದಲೂ ಸಮರ್ಥಿಸಲ್ಪಟ್ಟಿದೆ.

ರಾಮನೆಂಬ ಧೀರೋದಾತ್ತನಾಯಕನು ಐತಿಹಾಸಿಕ ವ್ಯಕ್ತಿಯೇ, ನಿಜವಾಗಿ ಜೀವಿಸಿದ್ದನೇ ಎಂಬ ಪ್ರಶ್ನೆ ಅಪ್ರಕೃತ. ಈ ಪ್ರಶ್ನೆ ಭಾರತೀಯರ ಮನಸ್ಸಿನಲ್ಲಿ ಎಂದೂ ಎದ್ದಿಲ್ಲ; ಇದು ಪಾಶ್ಚಾತ್ಯರ ವಿಮರ್ಶಾಪದ್ಧತಿಯ ವರಪ್ರಸಾದ. ನಮ್ಮಲ್ಲಿ ಎಂದೂ ರಾಮ ಆದರ್ಶ ವ್ಯಕ್ತಿ, ಅವತಾರ ಪುರುಷ. ಆರಾಧ್ಯ ದೈವ, ನಿಷ್ಕಳಂಕವಾದ ಜೀವನಕ್ಕೆ ನಿದರ್ಶನ, ಉದಾತ್ತವಾದ

ಸಾಂಸಾರಿಕ ಜೀವನದ ಧ್ಯೇಯ. ಈ ದೃಷ್ಟಿ ಜನರ ಮನಸ್ಸಿನಲ್ಲಿ ಬೇರೂರಿ ನಿಂತಿದೆ. ಇಷ್ಟು ಅನನ್ಯಸಾಧಾರಣವಾದ ಜನಪ್ರಿಯತೆಗೆ ವಾಲ್ಮೀಕಿಯ ಮಹಾಕಾವ್ಯ ಬಹುವಾಗಿ ಕಾರಣವೆಂದರೆ ತಪ್ಪಾಗದು. ಮಹಿಮಾನ್ವಿತ ವ್ಯಕ್ತಿಯೊಬ್ಬ ದೈವತ್ವವನ್ನು ಮುಟ್ಟಿ ನಿಂತಿರುವುದು ವಾಲ್ಮೀಕಿಯ ಪ್ರತಿಭೆಯಿಂದಲೇ ಎಂದೆನಿಸುತ್ತದೆ. ಸಾಮಾನ್ಯಜನರಲ್ಲಿ ರಾಮಾಯಣವು ಕಾವ್ಯವೆಂಬ ಗಣನೆಗಿಂತ 'ವೇದಃ ಪ್ರಾಚೇತಸಾದಾಸೀತ್ ಸಾಕ್ಷಾತ್ ರಾಮಾಯಣಾತ್ಮನಾ' ಎಂದರೆ ವಾಲ್ಮೀಕಿಯಿಂದ (ಪ್ರಾಚೇತಸನೆಂದರೆ ಅವನೇ) ವೇದವು ರಾಮಾಯಣದ ರೂಪದಲ್ಲಿ ಹೊರಬಂದಿತು ಎಂಬ ಕಲ್ಪನೆಯಲ್ಲೇ ಒಲವು ಹೆಚ್ಚು.

ವಾಲ್ಮೀಕಿಯ ರಾಮಾಯಣವು ಇಂದು ಬಳಕೆಯಲ್ಲಿರುವ ರೂಪವನ್ನು ಎಂದು ತಳೆಯಿತೆಂಬುದು ವಿವಾದಗ್ರಸ್ತ. ಕ್ರಿಸ್ತ ಪೂರ್ವ ಏಳನೆಯ ಶತಮಾನದ ವೇಳೆಗೆ ಪ್ರಚುರವಾದ ಜಾನಪದ ಸಾಹಿತ್ಯವನ್ನು ಆಧಾರವಾಗಿಟ್ಟುಕೊಂಡು ವಾಲ್ಮೀಕಿಯು ರಾಮಾಯಣವನ್ನು ರಚಿಸಿದನೆಂದು ಕೆಲವರ ಅಭಿಮತ. ಆದರೆ ಅಂದಿನಿಂದ ಕಾಲಕ್ರಮದಲ್ಲಿ ಅನೇಕ ಮಾರ್ಪಾಡುಗಳಾಗಿ ಕ್ರಿಸ್ತಾಬ್ದ ಐದನೆಯ ಶತಮಾನದ ಸುಮಾರಿಗೆ ಇಂದಿರುವ ರೂಪ ತಾಳಿತೆಂದು ನಂಬುವವರು ಇದ್ದಾರೆ. ಇಂದಿನ ರೂಪದಲ್ಲಿ ಏಳು ಕಾಂಡಗಳೂ 24,000 ಶ್ಲೋಕಗಳೂ ಇವೆ. ಎರಡನೆಯ ಕಾಂಡದಿಂದ ಆರನೆಯ ಕಾಂಡದವರೆಗೆ ಸ್ಥೂಲವಾಗಿ ಒಂದು ಏಕಸೂತ್ರ ಉಂಟು; ಪ್ರಕ್ಷಿಪ್ತಗಳನ್ನು ಬಿಟ್ಟರೆ, ಸಾಮಾನ್ಯವಾಗಿ ರಾಮ ಮಾನವನೆಂಬ ನಿರೂಪಣೆಯೇ ಕಾಣಸಿಗುತ್ತದೆ. 'ಆತ್ಮಾನಂ ಮಾನುಷಂ ಮನ್ಯೆ' ಎಂದು ದಾಶರಥಿಯಾದ ರಾಮನ ಬಾಯಲ್ಲೇ ಹೇಳಿಸಿರುವುದೂ ಉಂಟು. ವಾಲ್ಮೀಕಿಯು 'ಕೋऽನ್ವಸ್ಮಿನ್ ಸಾಂಪ್ರತಂ ಲೋಕೆ' ಎಂದು ಕೇಳಿದಾಗ ಅವನ ಮನಸ್ಸಿನಲ್ಲಿ ರಾಮ ಮನುಷ್ಯನೆಂದೇ ಇದ್ದಿರಬೇಕು. ಉದಾತ್ತವಾದ ಗುಣವಿಶಿಷ್ಟನಾದ ಧೀರೋದಾತ್ತ ನಾಯಕನೇ ಈ ಐದು ಕಾಂಡಗಳ ವಸ್ತು, ಆದರೆ ಮೊದಲನೆಯ ಬಾಲಕಾಂಡದಲ್ಲಿ

ರಾಮನು ಅವತಾರಪುರುಷ, ದೇವತೆ ಎಂಬ ಕಲ್ಪನೆ ಹಬ್ಬಿದೆ; ಅಲ್ಲದೆ ವಾಲ್ಮೀಕಿಯ ಕಥೆ, ರಾಮಾಯಣದ ಸಂಗ್ರಹ, ಉಪಕತೆಗಳು ಇತ್ಯಾದಿ ಪ್ರಸಂಗಗಳು ಒದಗಿಬರುತ್ತವೆ. ಈ ಭಾಗವು ದಿಟವಾಗಿ ವಾಲ್ಮೀಕಿಯ ಕೃತಿಯೋ ಎಂದು ಯಾರಿಗಾದರೂ ಸಂಶಯವಾದೀತು.

ಏಳನೆಯದಾದ ಉತ್ತರ ಕಾಂಡವಂತೂ (ನೂರ ಹನ್ನೊಂದು ಸರ್ಗಗಳದ್ದು) ನಿಜವಾಗಿ ಈಚಿನದು. ಬಾಲಕಾಂಡದ ನಾಲ್ಕನೆಯ ಸರ್ಗದಲ್ಲಿ ರಾಮಾಯಣದ ಪ್ರಮಾಣ ಪ್ರಸಂಗ ಬಂದಾಗ 'ಷಟ್ ಕಾಂಡಾನಿ' ಎಂದು ಬೇರೆಯಾಗಿ ಹೇಳಿದೆ. ರಾಮನ ಕಥೆ ಸಹಜವಾಗಿ ಆರನೆಯ ಯುದ್ಧಕಾಂಡದಲ್ಲಿ ಮುಕ್ತಾಯವಾಗುತ್ತದೆ. ಈ ಕಾಂಡದ ಸಮಾಪ್ತಿಯಲ್ಲಿ ಫಲಶ್ಲೋಕಗಳೂ ಉಂಟು.

ದಶವರ್ಷ ಸಹಸ್ರಾಣಿ ದಶವರ್ಷಶತಾನಿ ಚ।
ಭ್ರಾತೃಭಿಃ ಸಹಿತಃ ಶ್ರೀಮಾನ್ ರಾಮೋ ರಾಜ್ಯಮಕಾರಯತ್॥

ಈ ಶ್ಲೋಕವೇ ಕಾವ್ಯದ ಪರಿಸಮಾಪ್ತಿ ಎನ್ನುವ ವಾದದಲ್ಲಿ ಔಚಿತ್ಯ ಉಂಟು. ಬಾಲಕಾಂಡದಲ್ಲಿ ಬರುವ 'ರಘುವರ ಚರಿತಂ ಮುನಿಪ್ರಣೀತಂ ದಶಶಿರಸಶ್ಚ ವಧಂ ನಿಶಾಮಯಧ್ವಂ' ಎಂಬ ಒಕ್ಕಣೆಗೆ ಅನುಸಾರವಾಗಿಯೇ ಇದೆ.

ಹೀಗೆ ಸಂಪ್ರದಾಯಶುದ್ಧವಾಗಿ, ನೈಜವಾಗಿ ಮುಗಿದ ಕಥೆ, ಮತ್ತೆ ಉತ್ತರ ಕಾಂಡದಲ್ಲಿ ವಿಕಾರವಾಗಿ ಆರಂಭವಾಗುವುದು ಅಪ್ರಾಕೃತವೆನಿಸುತ್ತದೆ. ಉಳಿದ ರಾಮನ ಕಥೆಗೂ ಈ ಕಾಂಡದ ಪ್ರಸಂಗಗಳಿಗೂ ಸಂಬಂಧವೇ ಇಲ್ಲ. ಶೈಲಿಯಲ್ಲೂ ವೈಪರೀತ್ಯ ಉಂಟು. ಉತ್ತರ ಕಾಂಡವನ್ನು ಪೂರಾ ಬಿಟ್ಟು, ಬಾಲಕಾಂಡದ ಅಪ್ರಸಕ್ತ ಭಾಗಗಳನ್ನೂ ಬಿಟ್ಟು, ಉಳಿದ ಕಾಂಡಗಳಲ್ಲಿ ಪ್ರಕ್ಷಿಪ್ತವೆನ್ನಬಹುದಾದ ಶ್ಲೋಕಗಳನ್ನು ಬಿಟ್ಟರೆ ರಾಮಾಯಣದ ಆದಿಸ್ವರೂಪದ ಛಾಯೆಯನ್ನು ಕಾಣಬಹುದೆಂದು ಹಲವು ವಿದ್ವಾಂಸರ ವಾದ. ಈ ವಾದ ಪರಿಪುಷ್ಟವಾದ ಸಮರ್ಥನೆಗೆ ನಿಲುಕದಿದ್ದರೂ ವಿಶ್ವಸನೀಯ.

ಮಹಾಭಾರತದ ವನಪರ್ವದಲ್ಲಿ ಬರುವ ರಾಮೋಪಾಖ್ಯಾನದಲ್ಲಿಯಾಗಲಿ, ಗರುಡಪುರಾಣದ 148ನೆಯ ಅಧ್ಯಾಯದಲ್ಲಿ ಬರುವ ರಾಮಚರಿತೆಯಲ್ಲಾಗಲಿ ರಾಮಾಯಣದ ಉತ್ತರಕಾಂಡದ ವೃತ್ತಾಂತಗಳ ಪ್ರಸ್ತಾಪವಿರದು. ಮತ್ತು ಅಲ್ಲಿ ದಶರಥನಿಗೆ ಪಾಯಸ ಪ್ರದಾನ, ರಾಮನಿಂದ ಧನುರ್ಭಂಗ, ಸೀತೆಯ ಅಗ್ನಿಪರೀಕ್ಷೆ, ರಾಮನು ಕೈಗೊಂಡ ಅಶ್ವಮೇಧ ಇವುಗಳ ಉಲ್ಲೇಖವಾಗಲಿ ಇರದು. ಬೃಹದ್ಧರ್ಮಪುರಾಣ (ಪೂರ್ವ ಖಂಡ, 26, 9-15)ದಲ್ಲಿ ಕಂಡುಬರುವ ಪಾಠಕ್ರಮ ಯುದ್ಧ ಕಾಂಡಕ್ಕೇ ಮುಗಿಯುತ್ತದೆ. ಸ್ಕಂದಪುರಾಣದ ನಾರದಸನತ್ಕುಮಾರ ಸಂವಾದದಲ್ಲೂ ಉತ್ತರಕಾಂಡದ ಪಾಠವನ್ನು ಕಾಣಲಾರೆವು. ಸಾಂಪ್ರದಾಯಿಕವಾದ ರಾಮಾಯಣ ಪಾರಾಯಣವೂ ಷಟ್ಕಾಂಡದ್ದೇ; ಯುದ್ಧಕಾಂಡದಲ್ಲೇ ಮುಗಿಯುತ್ತದೆ; ಪಟ್ಟಾಭಿಷೇಕ ಪ್ರಸಂಗವೇ ಸಹಜವಾದ ಮುಕ್ತಾಯ. ಬ್ರಹ್ಮಾಂಡಪುರಾಣದ ಈ ಒಕ್ಕಣೆಯನ್ನು ನೋಡಿ -

'ಶ್ರೀಮದ್ರಾಮಾಯಣಂ ಶ್ರುತ್ವಾ
ಷಟ್ಕಾಂಡಂ ಭಕ್ತಿ ಸಂಯುತಾಃ ।
ಮಹದ್ರಾಜ್ಯಮವಾಪ್ನೋತಿ
ನಾತ್ರ ಕಾರ್ಯಾ ವಿಚಾರಣಾ ॥
ಷಟ್ಕಾಂಡಶ್ರವಣಂ ಯಸ್ತು
ಕುರ್ಯಾದ್ರಾಮಾಯಣೇ ಶುಭೇ ।
ತಸ್ಯ ಪುಣ್ಯಫಲಂ ವಕ್ತುಮ -
ಶಕ್ಯಂ ಸರ್ವದೇವತೈಃ ॥

ವಾದ-ವಿವಾದಗಳು ಹೇಗಾದರೂ ಇರಲಿ, ರಾಮಾಯಣದ ಪ್ರಶಸ್ತಿಯಂತೂ ಸರ್ವಸಮ್ಮತ. ರಾಮಾಯಣ ಆದಿಕಾವ್ಯ; ನಮ್ಮ ದೇಶದ ಎಲ್ಲ ಕಾಲದ, ಎಲ್ಲ ಕವಿಗಳಿಗೂ ವಾಲ್ಮೀಕಿ ಗುರುಪ್ರಾಯ. ಮಹಾಕವಿಯೆಂದು ವಿಶ್ವವಿಶ್ರುತನಾದ ಕಾಲಿದಾಸನೇ ವಾಲ್ಮೀಕಿಯನ್ನು 'ಪೂರ್ವಸೂರಿ'ಗಳ ಕೋಟಿಯಲ್ಲಿ ಸೇರಿಸಿ ಆದಿಕವಿ, ಕವಿಪ್ರಥಮ ಪದ್ಧತಿ ಎಂದು ಮುಕ್ತಕಂಠದಿಂದ

ಪ್ರಶಂಸಿಸಿದ್ದಾನೆ. ಕಾಳಿದಾಸನ ರಘುವಂಶವಲ್ಲದೆ, ಭಾಸನ ಪ್ರತಿಮಾ ಮತ್ತು ಅಭಿಷೇಕ ನಾಟಕಗಳು, ಭಟ್ಟಿಯ ರಾವಣವಧ, ಭವಭೂತಿಯ ಉತ್ತರರಾಮಚರಿತೆ, ಕುಮಾರದಾಸನ ಜಾನಕೀಹರಣ, ಕ್ಷೇಮೇಂದ್ರನ ರಾಮಾಯಣಮಂಜರೀ ಮೊದಲಾದ ಕಾವ್ಯಗಳಿಗೆಲ್ಲ ವಾಲ್ಮೀಕಿಯದೇ ಸ್ಫೂರ್ತಿ. ಹೀಗಾಗಿ ಅವನು 'ಪರಂ ಕವೀನಾಮಾಧಾರಂ' ಎನ್ನುವುದು ಉತ್ಪ್ರೇಕ್ಷೆಯಲ್ಲ. ಚಂಪೂ ರಾಮಾಯಣದ ರಚಯಿತೃವಾದ ಭೋಜ

ವಾಲ್ಮೀಕಿಗೀತರಘುಪುಂಗವಕೀರ್ತಿಲೇಶೈ -
ಸ್ತೃಪ್ತಿಂ ಕರೋಮಿ ಕಥಮಪ್ಯಧುನಾ ಬುಧಾನಾಂ।

ಎಂದಿದ್ದಾನೆ. ಕವಿಕ್ಷೇಮೇಂದ್ರನ ಮಾತುಗಳಲ್ಲಿ -

ಜ್ಯೇಷ್ಠೋ ಜಯತಿ ವಾಲ್ಮೀಕಿಃ ಸರ್ಗಬಂಧೇ ಪ್ರಜಾಪತಿಃ ।
ಯಃ ಸರ್ವ ಹೃದಯಾಲೀನಂ ಕಾವ್ಯಂ ರಾಮಾಯಣಂ ವ್ಯಧಾತ್ ॥

ಮತ್ತೆ, ನಮ್ಮಲ್ಲಿ ಯಾವ ಶ್ರದ್ಧಾಳು ತಾನೆ ಈ ಕೆಳಗಿನ ಮನೋಹರ-ವಾದ ವಾಲ್ಮೀಕಿ ಪ್ರಶಸ್ತಿಯನ್ನು ಕೇಳಿಲ್ಲ? -

ಕೂಜಂತಂ ರಾಮ ರಾಮೇತಿ ಮಧುರಂ ಮಧುರಾಕ್ಷರಂ ।
ಆರುಹ್ಯ ಕವಿತಾಶಾಖಾಂ ವಂದೇ ವಾಲ್ಮೀಕಕೋಕಿಲಂ ॥
ವಾಲ್ಮೀಕೇರ್ಮುನಿಸಿಂಹಸ್ಯ ಕವಿತಾವನಚಾರಿಣಃ।
ಶೃಣ್ವನ್ರಾಮಕಥಾನಾದಂ ಕೋ ನ ಯಾತಿ ಪರಾಂ ಗತಿಂ॥
ಯಃ ಪಿಬನ್ ಸತತಂ ರಾಮಚರಿತಾಮೃತಸಾಗರಂ ।
ಅತೃಪ್ತಸ್ತಂ ಮುನಿಂ ವಂದೇ ಪ್ರಾಚೇತಸಮಕಲ್ಮಷಂ ॥

ಈ ಶ್ಲೋಕಗಳಿಗೆ ಅನುವಾದದ ಅಗತ್ಯವಿದೆಯೆ? ಸಾರಸ್ವತ ಸಾಮಗ್ರಿಯಲ್ಲಿ, ವಸ್ತು ವಿನ್ಯಾಸದಲ್ಲಿ. ಶೈಲಿಯಲ್ಲಿ, ರಸನಿರೂಪಣೆಯಲ್ಲಿ, ಉಪಮೆಯಲ್ಲಿ, ಅಲಂಕಾರದಲ್ಲಿ, ಕೃತಿಗಾಂಭೀರ್ಯದಲ್ಲಿ ವಾಲ್ಮೀಕಿಯ ಮೇಲ್ಪಂಕ್ತಿ ಇಂದಿಗೂ ಅಜರಾಮರವಾಗಿ ಉಳಿದಿದೆ. ಮಾಧುರ್ಯದಲ್ಲಿ, ಪ್ರತಿಭೆಯಲ್ಲಿ ಅವನನ್ನು ಅತಿಕ್ರಮಿಸಿದ ಕವಿ ಇಂದಿಗೂ ಬಂದಿಲ್ಲ. ಕ್ರೌಂಚ

ಸ್ತ್ರೀಯ ವಿರಹದರ್ಶನದಿಂದ ಉದ್ವಿಗ್ನವಾದ ಕವಿಹೃದಯ ಕಾವ್ಯರಸಧಾರೆ
ಅನುವಾಯಿತೆಂಬ ದಂತಕಥೆಯಲ್ಲಿ ಸತ್ಯವೆಷ್ಟಿದೆಯೋ ತಿಳಿಯದು. ಆದ
ಕವಿಹೃದಯದ ಹೆಗ್ಗಳಿಕೆಗೆ ಅದಕ್ಕಿಂತ ಹೆಚ್ಚಿನ ಪ್ರಶಸ್ತಿ ಇರದು. ಬಾಲಕಾಂಡ
ಎರಡನೆಯ ಸರ್ಗದಲ್ಲಿ ಬ್ರಹ್ಮನ ಬಾಯಿಯಿಂದ ಒಂದು ಪ್ರಶಸ್ತಿಯನ
ಹೊರಡಿಸಿದ್ದಾರೆ. ಈ ಭಾಗ ವಾಲ್ಮೀಕಿ ಕೃತವಲ್ಲವೆಂಬುದಂತೂ ನಿಜ
"ಗುಡ್ಡ ಬೆಟ್ಟ - ನದಿ ನೀರು ಇರುವಷ್ಟು ದಿನವೂ ಲೋಕದಲ್ಲಿ ರಾಮನ
ಕಥೆ ಉಳಿಯುತ್ತದೆ. ಈ ರಾಮನ ಕಥೆ ಇರುವಷ್ಟು ದಿನವೂ ವಾಲ್ಮೀಕಿ
ಇಲ್ಲಿ, ಮೇಲೆ, ಬ್ರಹ್ಮಲೋಕದಲ್ಲಿ ಇರುತ್ತಾನೆ".

ಯಾವತ್ ಸ್ಥಾಸ್ಯಂತಿ ಗಿರಯಃ ಸರಿತಶ್ಚ ಮಹೀತಲೇ।
ತಾವದ್ ರಾಮಾಯಣಕಥಾ ಲೋಕೇಷು ಪ್ರಚರಿಷ್ಯತಿ॥
ಯಾವದ್ ರಾಮಾಯಣಕಥಾ ತ್ವತ್ಕೃತಾ ಪ್ರಚರಿಷ್ಯತಿ।
ತಾವದ್ ಊರ್ಧ್ವಮಧಶ್ಚ ತ್ವಂ ಮಲ್ಲೋಕೇಷು ನಿವತ್ಸ್ಯಸಿ॥

ಈ ಉಕ್ತಿ ನಮ್ಮ ದಿನದವರೆಗಂತೂ ನಿಜವಾಗಿದೆ. ಸುಮಾರು ಮೂರುಸಾವಿರ ವರ್ಷಗಳ ಪರ್ಯಂತವಾದರೂ ಒಮ್ಮೆಯೂ ಮರೆಯಾಗದೆ ನಮ್ಮಲ್ಲಿ ನಿಂತ ಒಂದೇ ಕಥೆಯೆಂದರೆ ರಾಮಾಯಣದ ಕಥೆ. ಕವಿಯ ಪ್ರತಿಭೆ ಇನ್ನೇನನ್ನು ತಾನೆ ನಿರೀಕ್ಷಿಸೀತು?

ರಾಮಾಯಣವನ್ನು ಎಂದೂ ನಮ್ಮವರು ಕಾವ್ಯವೆಂದೇ ಪರಿಗಣಿಸಿದ್ದಾರೆ. 'ವಾಲ್ಮೀಕಿಯ ವದನಾರವಿಂದದಿಂದ ಸರಸ್ವತಿ ಛಂದೋಮಯಿಯಾಗಿ ಹರಿದಳು', 'ವಾಲ್ಮೀಕೇರ್ವದನಾರವಿಂದಾ-ಚ್ಛಂದೋಮಯೀ ಕಾಚಿದೇವಂ ನಿಃಸಸಾರ ಸರಸ್ವತೀ' ಎನ್ನುವ ಮಾತು ಭೋಜಕವಿಯ ಚಂಪೂರಾಮಾಯಣದಲ್ಲಿ ಬರುತ್ತದೆ. ಅಭಿರಾಮನಾದ ರಾಮನ ಚರಿತ್ರೆ ಸಮುದ್ರದಂತೆ ರತ್ನಾಢ್ಯ, ಸರ್ವಶ್ರುತಿಮನೋಹರ, ಧರ್ಮಾರ್ಥಗುಣವಿಸ್ತರ, ಕಾಮಾರ್ಥಗುಣಸಂಪನ್ನ, ಕಾವ್ಯಕ್ಕೆ ಪ್ರಶಸ್ತವಾದ ವಸ್ತು. ರಾಮಾಯಣಕಾವ್ಯವೂ ('ಪಾಠ್ಯೇ ಗೇಯೇ ಚ ಮಧುರಂ,

ಪ್ರಮಾಣೈಸ್ತ್ರಿಭಿರನ್ವಿತಂ, ಜಾತಿಭಿಸ್ಸಪ್ತಭಿರ್ಬದ್ಧಂ, ತಂತ್ರೀಲಯ ಸಮನ್ವಿತಂ, ರಸೈಃ.... ಸಂಯುಕ್ತಂ') ಓದಲು, ಹಾಡಲು, ಸೊಗಸಾದುದು, ಪ್ರತ್ಯಕ್ಷ ಯುಕ್ತಿ ಶ್ರುತಿ ಮೂರೂ ಪ್ರಮಾಣಗಳಿಂದ ಕೂಡಿದ್ದು, ಹಾಡಲು ಅನುಕೂಲವಾಗಿ ರಾಗಗಳಿಂದ ತುಂಬಿದ್ದು, ವಾದನಕ್ಕೂ ಒಗ್ಗುವಂಥದು, ರಸಗಳಿಂದ ಉಕ್ಕಿ ಹರಿಯುವಂಥದು ಎಂಬ ಒಕ್ಕಣೆ ಅಲ್ಲಿಯೇ ಇದೆ. ರಾಮಾಯಣದ ರಸಪುಷ್ಟಿಗೆ ತಲೆದೂಗಿ ವಾಲ್ಮೀಕಿಯ ಪ್ರತಿಭೆಯಲ್ಲಿ ಮೈಮರೆತ ಅಜ್ಞಾತನಾದ ಕವಿ - 'ಅಹೋ ಗೀತಸ್ಯ ಮಾಧುರ್ಯಂ ಶ್ಲೋಕಾನಾಂ ಚ ವಿಶೇಷತಃ!" ಎಂದು ತನ್ನ ಸಂತಸವನ್ನೂ ಅಚ್ಚರಿಯನ್ನೂ ಸೂಚಿಸಿದ್ದಾನೆ.

ರಾಮನು ಅಯೋಧ್ಯೆಗೆ ಹಿಂದಿರುಗಿ ರಾಜನಾದಮೇಲೆ ಅವನ ಸಭೆಯಲ್ಲಿ ಅವನ ಮಕ್ಕಳಾದ ಕುಶಲವರೆಂಬುವರು ರಾಮಾಯಣವನ್ನು ಹಾಡಿದರೆಂಬ ಸಂದರ್ಭ ಕಲ್ಪಿತವಾಗಿರುವುದು ಸಹಜವೇ; ರಾಮಾಯಣದಲ್ಲಿ ಇಷ್ಟು ಮಾಧುರ್ಯವಿದೆ. ಶ್ರವ್ಯಕಾವ್ಯದಲ್ಲಿ ಗೇಯಗುಣ ಅವಶ್ಯಕ. ರಾಮಾಯಣವನ್ನು ಅವಲೋಕಿಸಿಯೇ ಲಕ್ಷಣಗ್ರಂಥಗಳು ಮಹಾಕಾವ್ಯದ ರೀತಿನೀತಿಗಳನ್ನು ನಿಷ್ಕರ್ಷಿಸಿರುವುದು. ರಾಮಾಯಣದ ಆಧಾರದ ಮೇಲೆಯೇ ಅಶ್ವಘೋಷ, ಕಾಳಿದಾಸ, ಭವಭೂತಿ ಮುಂತಾದ ಮಹಾಕವಿಗಳು ತಮ್ಮ ಕಥನಕೌಶಲವನ್ನು ರೂಪಿಸಿಕೊಂಡಿರುವುದು. ಪಂಚಮಹಾಕಾವ್ಯಗಳಲ್ಲಿ ಒಂದಾದ ಕಾಳಿದಾಸನ 'ರಘುವಂಶ' ವಾಲ್ಮೀಕಿಯನ್ನೇ ಅನುಸರಿಸಿದ್ದು. ರಾಮಾಯಣವೆಂಬ ಸಮುದ್ರದಲ್ಲಿ ದೊರೆಯುವ ರತ್ನಗಳೇ ಅಸಂಖ್ಯ ಕಾವ್ಯಗಳಿಗೆ, ನಾಟಕಗಳಿಗೆ, ಶಾಸ್ತ್ರಗ್ರಂಥಗಳಿಗೆ ಸಾಮಗ್ರಿಯನ್ನು ಒದಗಿಸಿವೆ.

ಎಲ್ಲ ಕಾವ್ಯಪ್ರಕಾರಕ್ಕೆ ವಾಲ್ಮೀಕಿಯೇ ಪ್ರವರ್ತಕನೆಂದು ಅಭಿನವಗುಪ್ತನ ಉಪಾಧ್ಯಾಯ ಭಟ್ಟತೌತ ಹೇಳಿದ್ದಾನೆ - ವಾಲ್ಮೀಕಿಯ ಶೋಕವು ಶ್ಲೋಕವಾದದ್ದೇ ಕವಿತೆಯ ಉಗಮಕ್ಕೆ ಕಾರಣವಾಯಿತಂತೆ - ಕವಿಗೆ ದರ್ಶನ ವರ್ಣನಗಳೆರಡೂ ಇರಬೇಕು; ಕ್ರೌಂಚಮಿಥುನದಲ್ಲಿ ಒಂದನ್ನು

ಬೇಡ ಕೊಂದದ್ದು ಮುನಿಯಾದ ವಾಲ್ಮೀಕಿಯ ಶೋಕಕ್ಕೆ ಎಡೆಮಾಡಿಕೊಟ್ಟಿತು ವರ್ಣನೆಗೆ ಅವಕಾಶವಾಯಿತು

'ದರ್ಶನಾದ್ ವರ್ಣನಾಚ್ಚಾಥ ರೂಢಾ ಲೋಕೇ ಕವಿಶ್ರುತಿಃ ।
ತಥಾ ಹಿ ದರ್ಶನೇ ಸ್ವಚ್ಛೇ ನಿತ್ಯೇಽಪ್ಯಾದಿಕವೇರ್ಮುನೇಃ
ನೋದಿತಾ ಕವಿತಾ ಲೋಕೇ ಯಾವಜ್ಜಾತಾ ಸ ವರ್ಣನಾ ॥

ಧ್ವನ್ಯಾಲೋಕಕಾರನಾದ ಆನಂದವರ್ಧನನೂ ಇದನ್ನು ಎತ್ತಿ ಹೇಳಿದ್ದಾನೆ -

'ಕಾವ್ಯಸ್ಯಾತ್ಮಾ ಸ ಏವಾರ್ಥಸ್ತಥಾ ಚಾದಿಕವೇಃ ಪುರಾ ।
ಕ್ರೌಂಚದ್ವಂದ್ವವಿಯೋಗೋತ್ಥಃ ಶೋಕಃ ಶ್ಲೋಕತ್ವಮಾಗತಃ॥

ಭಾರತದ ದೇಶೀಯ ಭಾಷೆಗಳಲ್ಲೂ ವಾಲ್ಮೀಕಿಯ ಪ್ರತಿಭೆ ನಿರ್ವಿವಾದವಾಗಿ ನಿಂತಿದೆ. ಅತಿ ಪ್ರಾಚೀನ ಕಾಲದಿಂದ ಪ್ರಾಂತೀಯ ಭಾಷೆಗಳಲ್ಲಿ ರಾಮಾಯಣಗಳು ರಚಿತವಾಗಿವೆ. ಹಿಂದಿಯಲ್ಲಿ ತುಳಸೀದಾಸರ 'ರಾಮಚರಿತಮಾನಸ', ಬಂಗಾಳಿಯಲ್ಲಿ 'ಕೃತ್ತಿವಾಸ ರಾಮಾಯಣ', ತೆಲುಗಿನಲ್ಲಿ 'ರಂಗನಾಥ ರಾಮಾಯಣ', ತಮಿಳಿನಲ್ಲಿ 'ಕಂಬರಾಮಾಯಣ', ಕನ್ನಡದಲ್ಲಿ 'ತೊರವೆ ರಾಮಾಯಣ' ಇತ್ಯಾದಿ. ಆಧುನಿಕ ಕವಿಗಳೂ, ನಾಟಕಕರ್ತೃಗಳೂ ವಾಲ್ಮೀಕಿಯಿಂದ ಉಪಕೃತರಾಗುತ್ತಿದ್ದಾರೆ. ಬಂಗಾಳಿಯಲ್ಲಿ ಈಶ್ವರಚಂದ್ರ ವಿದ್ಯಾಸಾಗರರ 'ಸೀತಾವನವಾಸ', ಮಧುಸೂದನದತ್ತರ 'ಮೇಘನಾದವಧ', ಹಿಂದಿಯಲ್ಲಿ 'ಪಂಚವಟಿ' ಮುಂತಾದ ಖಂಡ ಗ್ರಂಥಗಳು, ಕನ್ನಡದ 'ರಾಮಾಶ್ವಮೇಧ', ನಮ್ಮ ಕಾಲದ ಕುವೆಂಪು ಅವರ 'ರಾಮಾಯಣ ದರ್ಶನ' ಇತ್ಯಾದಿ. ಅಂತೂ ವಾಲ್ಮೀಕಿಯ ರಾಮಾಯಣವು ವಿವಿಧ ಸಾರಸ್ವತ ಸ್ರೋತಗಳಿಗೆ ಉಗಮಸ್ಥಾನವಾಗಿ ನಿಂತಿದೆ.

ರಾಮಾಯಣದ ಮುಖ್ಯ ವಸ್ತುವಾದ ರಾಮ ಧೀರೋದಾತ್ತನಾಯಕ. 'ಲೋಕದಲ್ಲಿ ಉತ್ತಮನಾದ ಪುರುಷ ಯಾರು?' ಎಂಬ ಪ್ರಶ್ನೆಯಿಂದಲೇ

ರಾಮಾಯಣ ಕಾವ್ಯ ಆರಂಭವಾಗುತ್ತದೆ. ರಾಮ ಗುಣವಂತ, ವೀರ್ಯವಂತ, ಧರ್ಮಜ್ಞ, ಕೃತಜ್ಞ, ಸತ್ಯವಾಕ್ಯ, ದೃಢವ್ರತ, ಚಾರಿತ್ರಯುಕ್ತ, ಸರ್ವಭೂತ ಹಿತೇರತ, ವಿದ್ವಾನ್, ಸಮರ್ಥ, ಪ್ರಿಯದರ್ಶನ, ಜಿತಕ್ರೋಧ, ಆತ್ಮವಾನ್, ಅನಸೂಯಕ; ಇಷ್ಟು ಕಲ್ಯಾಣಗುಣಗಳು ಒಬ್ಬ ಮಾನವನಲ್ಲೇ ಸಂನಿಹಿತವಾಗುವುದು ದುರ್ಲಭ. ಹೀಗೆ ಆದಾಗ, ಅಂಥವನು ಪೂಜಾರ್ಹ, ದೇವತಾತ್ಮ ಎಂತಲೇ ರಾಮನಿಗೆ ಈ ಗೌರವ. ರಾಮನ ವಿಚಾರವಾಗಿ ವಾಲ್ಮೀಕಿಯ ಶ್ರದ್ಧೆ ಗಾಢವಾದದ್ದು. ಅವನ ಯಶಸ್ಸನ್ನು ಶುಚಿಯಾದದ್ದೆಂದು ವರ್ಣಿಸುತ್ತಾನೆ; ರಾಮನ ಸ್ಥೈರ್ಯ, ಶೌರ್ಯಗಳಿಗಿಂತ ಅವನ ಸಮಾಧಿ, ಪ್ರಜ್ಞೆ, ಜ್ಞಾನ, ಧರ್ಮ, ಸ್ಮೃತಿ, ತ್ಯಾಗ ಈ ಗುಣಗಳ ಮೇಲೆ ವಾಲ್ಮೀಕಿಯ ವಿಶ್ವಾಸ. ರಾಮನನ್ನು ಸರ್ವಲೋಕಪ್ರಿಯ, ಸಾಧು, ಅದೀನಾತ್ಮಾ ವಿಚಕ್ಷಣ ಎಂದು ವರ್ಣಿಸುವಲ್ಲಿ ವಾಲ್ಮೀಕಿಯ ವ್ಯಕ್ತಿತ್ವವೇ ವ್ಯಕ್ತವಾಗುತ್ತದೆ. 'ಸಮುದ್ರ ಇವ ಗಾಂಭೀರ್ಯೆ, ಧೈರ್ಯೇಣ ಹಿಮವಾನ್ ಇವ' ಇದಕ್ಕಿಂತ ರಮಣೀಯತರವಾದ ಪ್ರಶಸ್ತಿ ಯಾರಿಗೆ ತಾನೆ ದೊರೆತೀತು? 'ಪ್ರಿಯದರ್ಶನ' ಎಂಬ ವಿಶೇಷಣವನ್ನಂತೂ ರಾಮನಿಗೆ ವಾಲ್ಮೀಕಿ ಪದೇ ಪದೇ ಉಪಯೋಗಿಸಿದ್ದಾನೆ. ಇಂಥ ನಾಯಕನಿಗೆ ವಧುವಾದ ಸೀತೆ 'ಸರ್ವಲಕ್ಷಣ ಸಂಪನ್ನೆ', 'ನಾರೀಣಾಮುತ್ತಮಾ'; ಚಂದ್ರನಿಗೆ ರೋಹಿಣಿ ಇದ್ದಂತೆ ರಾಮನ ದಯಿತೆ ಸೀತೆ. ವಾಲ್ಮೀಕಿಯ ವಚೋಶಕ್ತಿಯೆಲ್ಲ ಈ ದಂಪತಿಗಳ ಚಿತ್ರಣದಲ್ಲಿ ಮುಗಿದಿದೆ; 'ಹಸಿತಂ ಭಾಷಿತಂ ಚೈವ ಗತಿರ್ಯಾ ಯಚ್ಚ ಚೇಷ್ಟಿತಂ' ಇಷ್ಟನ್ನೂ ವಿಸ್ತರಿಸಿ ಬಣ್ಣಿಸಿದ್ದಾನೆ.

ಇಲ್ಲಿ ಅದ್ಭುತವರ್ಣನೆಗೆ ಪ್ರಾಶಸ್ತ್ಯ ಇಲ್ಲದಿರುವುದನ್ನು ಗಮನಿಸಬೇಕು. ಅತಿಮಾನುಷವಾದ ಪ್ರಸಂಗಗಳ ಪ್ರಸ್ತಾಪವು ಮೂಲನಿರೂಪಣೆಯಲ್ಲಿ ಅತಿಯಾಗಿಲ್ಲ. ಮನುಷ್ಯ ಯತ್ನದಿಂದ, ನಿಷ್ಠೆಯಿಂದ ವಶಮಾಡಿಕೊಳ್ಳ-ಬಹುದಾದ ಗುಣಸಂಪತ್ತಿಯನ್ನೇ ರಾಮನ ವ್ಯಕ್ತಿತ್ವ ಮೂರ್ತೀಭವಿಸುವುದು. ಮನುಷ್ಯನ ನಿಲುವಿಗೆ ನಿಲುಕದ ವಿಶೇಷಣಗಳಲ್ಲಿ ವಾಲ್ಮೀಕಿಗೆ ಅಕ್ಕರೆ ಇಲ್ಲ.

ನಿಜವಾಗಿ ರಾಮಾಯಣವು ಉತ್ತಮನಾದ ಮನುಷ್ಯನೊಬ್ಬನು ಸರ್ವಸನ್ಮಾನಿತನಾಗಿ ಅಜರಾಮರನಾದ ಕಥೆಯನ್ನು ಹೇಳುತ್ತದೆ. ರಾಮನ ಗುಣಗಳಿಗೆ ಪರವಶನಾಗಿ ವಾಲ್ಮೀಕಿ "ಧರ್ಮವೆಂಬುದು ಮೈವೆತ್ತಿ ಬರುವುದಾದರೆ ಅದೇ ರಾಮ" (ರಾಮೋ ವಿಗ್ರಹವಾನ್ ಧರ್ಮಃ) ಎನ್ನುವಾಗಲಂತೂ ನಾವೂ ಮೈಮರೆಯುತ್ತೇವೆ. ಈ ಮಂಗಳಶ್ಲೋಕದಲ್ಲೂ ಮನುಷ್ಯತ್ವಕ್ಕೇ ವೈಶಿಷ್ಟ್ಯ ಇದೆ -

ಮಂಗಳಂ ಕೋಸಲೇಂದ್ರಾಯ ಮಹನೀಯಗುಣಾಬ್ಧಯೇ ।
ಚಕ್ರವರ್ತಿತನೂಜಾಯ ಸಾರ್ವಭೌಮಾಯ ಮಂಗಳಂ ॥

ವಾಲ್ಮೀಕಿಯ ರಾಮಾಯಣಕಾವ್ಯದ ಶಕ್ತಿಯಿಂದ ರಾಮನಿಗೆ ಹಿರಿಮೆ ಬಂದಿತು; ವಾಲ್ಮೀಕಿ ಇರದಿದ್ದರೆ ರಾಮನು ಚಾರಿತ್ರಕ ವ್ಯಕ್ತಿಯಾಗಿದ್ದರೂ ನಮ್ಮ ಸ್ಮೃತಿಪಥದಿಂದ ಈ ವೇಳೆಗೆ ಜಾರುತ್ತಿದ್ದನೇನೋ ಎನಿಸುತ್ತದೆ. ರಾಮಾಯಣದ ಶಕ್ತಿಗೆ ಅದರ ವಸ್ತುವಿನ ಹಿರಿಮೆಯೇ ಕಾರಣ; ರಾಮನಲ್ಲದೆ ಬೇರೊಂದು ವಸ್ತುವನ್ನು ವಾಲ್ಮೀಕಿಯು ಆರಿಸಿಕೊಂಡಿದ್ದರೆ ಆ ಕಾವ್ಯ ಈವರೆಗೆ ಉಳಿಯುತ್ತಿರಲಿಲ್ಲ ಎನ್ನುವುದೂ ದಿಟವೇ. ಅನ್ಯೋನ್ಯಾಶ್ರಯಸಂಬಂಧದಲ್ಲಿ ವಾಲ್ಮೀಕಿ - ರಾಮ ಇಬ್ಬರೂ ನಿಂತಿದ್ದಾರೆ. ರಾಮನ ಚರಿತ್ರೆ ಉದಾತ್ತವಾದದ್ದು; ಅವನ ವೃತ್ತ ಜಗದ್ವಂದ್ಯ, ಮಾನವಕೋಟಿಗೆ ಸ್ಫೂರ್ತಿದಾಯಕ. ಅವನ ಕೀರ್ತಿಯಲ್ಲಿ ಔದಾರ್ಯವಿದೆ, ಸೌಂದರ್ಯವಿದೆ, ದಾರ್ಢ್ಯವಿದೆ. ಅವನ ಕಥೆ ಮಂಗಳವಾದುದು. ರಾಮನ ಅದ್ಭುತವಾದ ವ್ಯಕ್ತಿತ್ವವೇ ವಾಲ್ಮೀಕಿಯ ಪ್ರತಿಭೆಯನ್ನು ಧ್ವನಿಸಿದ್ದು ಎಂಬುದು ದಿಟ.

ಆದರೆ ರಾಮಾಯಣವೂ ಸುಭಗಸುಂದರವಾದ ಕೃತಿ; ಅದರಲ್ಲಿ ಓಜಸ್ಸಿದೆ, ರಮ್ಯತೆಯಿದೆ, ನವನವೋನ್ಮೇಷಶಾಲಿನಿಯಾದ ಪ್ರತಿಭೆಯಿದೆ. ರಾಮನ ಚರಿತೆ ಅಮೃತಸಾಗರವಾದದ್ದು ವಾಲ್ಮೀಕಿಯ ಕೃಪೆಯಿಂದಲೇ ಎಂದರೂ ಅನುಚಿತವಾಗದು. ರಾಮಾಯಣದಲ್ಲೇ ಸೇರಿರುವ ಒಂದು

ಶ್ಲೋಕ ಈ ಅರ್ಥವನ್ನೇ ಸೂಚಿಸುತ್ತದೆ. ರಾಮ-ವಾಲ್ಮೀಕಿಗಳ ಅನ್ಯೋನ್ಯಾಶ್ರಯ ಸಂಬಂಧ ಎಷ್ಟು ನಿಕಟವಾದದ್ದು ಎಂದು ಹೇಳುತ್ತದೆ;

ಉದಾರವೃತ್ತಾರ್ಥಪದೈರ್ಮನೋರಮೈಸ್ತತಃ ಸ
ರಾಮಸ್ಯ ಚಕಾರ ಕೀರ್ತಿಮಾನ್।
ಸಮಾಕ್ಷರೈಃ ಶ್ಲೋಕಶತೈರ್ಯಶಸ್ವಿನೋ
ಯಶಸ್ಕರಂ ಕಾವ್ಯಮುದಾರಧೀರ್ಮುನಿಃ॥
ತದುಪಗತಸಮಾಸಸಂಧಿಯೋಗಂ
ಸಮಮಧುರೋಪನತಾರ್ಥವಾಕ್ಯಬದ್ಧಂ।
ರಘುವರಚರಿತಂ ಮುನಿಪ್ರಣೀತಂ.....

ವಾಲ್ಮೀಕಿಯು ಕಾವ್ಯರೂಪದಲ್ಲಿ ರಚಿಸಿದ ರಾಮಾಯಣವನ್ನು ರಾಮನ ಮಕ್ಕಳಾದ ಕುಶ-ಲವರು ರಾಮನ ಸಮ್ಮುಖದಲ್ಲೇ ಹಾಡಿದರೆಂಬ ಕಲ್ಪನೆಯ ಪ್ರಸ್ತಾಪ ಬಂದಿತಲ್ಲ? ಬಾಲಕಾಂಡದಲ್ಲಿ ಇವರ ಉಲ್ಲೇಖ ಬರುತ್ತದೆ. ಆದರೆ ಇಲ್ಲಿ ಇವರು ರಾಮನ ಮಕ್ಕಳೆನ್ನುವ ವಿವರ ಕಾಣಸಿಗುವುದಿಲ್ಲ. "ಬಿಂಬಾದಿವೋತ್ಥಿತೌ ಬಿಂಬೌ ರಾಮದೇಹಾತ್ತಥಾಪರೌ'' ಎಂದಷ್ಟೇ ಉಲ್ಲೇಖವಿದೆ. ಅವರನ್ನು ಸೋದರರು, ಯಶಸ್ವಿಗಳಾದ ರಾಜಪುತ್ರರು, ಮೇಧಾವಿಗಳು, ಮಧುರಸ್ವರಸಂಪನ್ನರು, ಗಾಂಧರ್ವತತ್ತ್ವಜ್ಞರು (ಎಂದರೆ ಸಂಗೀತ ತಿಳಿದವರು), ವೇದ ಬಲ್ಲವರು, ತಪಸ್ವಿಗಳು ಎಂದು ನಾಲ್ಕನೆಯ ಸರ್ಗ ಬಣ್ಣಿಸುತ್ತದೆ. ಇವರನ್ನು ಸಾಮಾನ್ಯವಾಗಿ ಇಲ್ಲಿ ಒಟ್ಟಾರೆ "ಕುಶೀಲವರು" ಎಂದು ವ್ಯವಹರಿಸಿದ್ದಾರೆ. ಒಂದೆಡೆ ಮಾತ್ರ ಅವರ ಹೆಸರು ಕುಶ, ಲವ, ಎಂದು ಹೇಳಿದ್ದಾರೆ. "ಕುಶೀಲವೌ ಕುಶಲವನಾಮಧಾರಿಣೌ."

ಸಂಸ್ಕೃತದಲ್ಲಿ 'ಕುಶೀಲವ' ಎಂಬುದೊಂದು ಪದವುಂಟು. ಇದು ಯಾವೊಬ್ಬ ವ್ಯಕ್ತಿಯ ಹೆಸರಲ್ಲ, ವೃತ್ತಿನಿರ್ದೇಶಕ ಪದ, 'ಸೂತಪೌರಾಣಿಕ' ಎಂಬಂತೆ. ಕುಶೀಲವರೆಂದರೆ ಕಾವ್ಯೋಪಜೀವಿಗಳು; ನಾಡಗಬ್ಬಗಳನ್ನು ಊರಜನರ ಮುಂದೆ ಗೀತ ವಾದ್ಯಗಳೊಂದಿಗೆ ಬಿತ್ತರಿಸಿ, ವಿವಿಧ ರಸಗಳನ್ನು ಒದಗಿಸಿ ಮನೋರಂಜನೆ ಮಾಡಿ ಊರೂರು ತಿರುಗುತ್ತಿದ್ದ ಮಂದಿ.

ಬಾಲಕಾಂಡದ ಉಲ್ಲೇಖದಲ್ಲೂ ಈ ಕುಶೀಲವರು ವಾಲ್ಮೀಕಿಯ ಇಡೀ ಕಾವ್ಯವನ್ನು ವಾಚೋವಿಧೇಯವನ್ನಾಗಿ ಮಾಡಿಕೊಂಡು ಋಷಿಗಳ, ದ್ವಿಜರ, ಸಾಧುಗಳ ಮುಂದೆ ರಾಮನ ಕಥೆಯನ್ನು ಇಂಪಾಗಿ ಕಥನ ಮಾಡಿದ ಸಂದರ್ಭವಿದೆ. ರಾಮ ಅವರನ್ನು ಕಂಡದ್ದೂ ಕೂಡ ಹೀಗೆ ಅವರು ಬೀದಿಬೀದಿಗಳಲ್ಲಿ ಹಾಡಿಕೊಂಡು ತಿರುಗುತ್ತಿದ್ದಾಗಲೇ (ರಥ್ಯಾಸು ರಾಜಮಾರ್ಗೇಷು). ರಾಮ ಅವರಿಂದ ತನ್ನ ಕಥೆಯನ್ನೇ ಹಾಡಿಸಿ, ಕೇಳಿ ಆನಂದಿಸಿದಾಗಲೂ ಅವನಿಗೆ ಅವರು ತನ್ನ ಮಕ್ಕಳೆಂದು ಅರಿವಾದುದು ಇಲ್ಲಿ ಕಾಣಬರುವುದಿಲ್ಲ. ಆ ಸಂದರ್ಭದಲ್ಲಾಗಲೀ, ಈ ಸನ್ನಿವೇಶದಲ್ಲಾಗಲೀ ಇವರು ವಾಲ್ಮೀಕಿಯ ಆಶ್ರಮದಲ್ಲಿ ಬೆಳೆದವರೆಂಬ ವಿವರವಿಲ್ಲ.

ಇಷ್ಟಲ್ಲದೆ, ನೆರೆದ ಜನ ಇವರ ಗೀತ ಕಥನವನ್ನು ಮೆಚ್ಚಿಕೊಂಡಾಗ "ಇವರು ಹಾಡುವುದನ್ನು ಕೇಳಿದರೆ, ತುಂಬ ಹಿಂದೆ ನಡೆದ ಈ ಕಥೆ ಈಗ ಕಣ್ಣಿಗೆ ಕಟ್ಟಿದಂತಿದೆ" (ಚಿರನಿರ್ವೃತ್ತಮಪ್ಯೇತತ್ ಪ್ರತ್ಯಕ್ಷಮಿವ ದರ್ಶಿತಂ) ಎಂದು ಹೇಳಿರುವುದನ್ನು ಗಮನಿಸಬೇಕು. ರಾಮನ ಕಥೆ ಇಂಥ ಕುಶೀಲವರಿಂದ ಆಗಲೇ ಹತ್ತಾರು ತಲೆಮಾರುಗಳಲ್ಲಿ ಜನಪ್ರಿಯವಾಗಿದ್ದಿತು, ಪ್ರಚುರವಾಗಿದ್ದಿತು. ಹೀಗೆ ಪ್ರಚಲಿತವಾಗಿದ್ದ ಜಾನಪದ ಕಥೆಯನ್ನು ವಾಲ್ಮೀಕಿಯು ಕಾವ್ಯವನ್ನಾಗಿ ಪರಿವರ್ತಿಸಿ, ಮತ್ತೆ ಕುಶೀಲವರ ವಶಕ್ಕೇ ಒಪ್ಪಿಸಿದನೆನ್ನಬಹುದು. ಕುಶೀಲವರ ನಿರೂಪಣೆಯಿಂದ ಮುಗ್ಧರಾದ ಜನ "ಆಶ್ಚರ್ಯಮಿದಮಾಖ್ಯಾನಂ ಮುನಿನಾ ಸಂಪ್ರಕೀರ್ತಿತಂ", "ಪರಂ ಕವೀನಾಮಾಧಾರಂ" ಎಂದು ಮುಂತಾಗಿ ಪ್ರಶಂಸಿಸಿದ್ದಾರೆ. ವಾಲ್ಮೀಕಿಯೆಂಬ ತಪಸ್ವಿಯು ಮಾಡಿದ ಕಾವ್ಯವನ್ನು ಕುಶೀಲವರು ಎತ್ತಿಕೊಂಡು ಜನಗಳಿಗೆ ಪರಿಚಯಮಾಡಿಕೊಟ್ಟರು. ರಾಮಾಯಣ ಸಾವಿರಾರು ವರ್ಷಗಳ ಜನರ ನಿತ್ಯಜೀವನದಲ್ಲಿ ಉಳಿದುಬಂದಿದೆಯಷ್ಟೆ. ಇದಕ್ಕೆ ಊರೂರು ತಿರುಗಿ ಕೇರಿ ಕೇರಿಗಳಲ್ಲಿ ನಿರೂಪಣೆ ಮಾಡಿದ ಕುಶಲವರೇ ಬಹುಮಟ್ಟಿಗೆ ಕಾರಣ.

ಕುಶಲವರು ರಾಮನ ಮಕ್ಕಳೇ ಎಂದು ಭಾವಿಸಿದರೂ ರಾಮ ಅವರನ್ನು ಮೊಟ್ಟಮೊದಲು ಸಂದರ್ಶಿಸಿದುದು ಈ ಕಥನಕಾಲದಲ್ಲೇ, ಆದರ ಅವರ ಬಾಂಧವ್ಯದ ಅರಿವಾದುದು ಅನಂತರವೇ, ಎಂಬ ಕಲ್ಪನೆ ನಮ್ಮಲ್ಲಿ ಬೆಳೆದುಬಂದಿದೆ. ಇದು ಮೂಡಿಬಂದಿರುವುದು ಉತ್ತರಕಾಂಡದ ತೊಂಬತ್ತೈದನೆಯ ಸರ್ಗದಲ್ಲಿ ಬರುವ ಪ್ರಸ್ತಾಪದ ಆಧಾರದ ಮೇಲೆ. ಈ ಪ್ರಸ್ತಾಪವೂ ತೀರ ಪ್ರಾಸಂಗಿಕವಾಗಿ ಬಂದಿದೆ. ಹಿಂದೆ ಸೂಚಿಸಿದಂತೆ ಇಡೀ ಉತ್ತರಕಾಂಡವು ಪ್ರಾಚೀನವೆನ್ನಬಹುದಾದ ಕಥಾಭಾಗವಲ್ಲ. ಕುಶಲವರ ಕಲ್ಪನೆಯೂ ಕಾಲಾಂತರದ ಸೃಷ್ಟಿಯೇ.

ಹೀಗೆಯೇ ರಾಮಾಯಣದ ವಸ್ತುವಿನ್ಯಾಸ ಕಾಲಕಾಲಕ್ಕೆ ಕುಶೀಲವರ ಪ್ರತಿಭೆಯಿಂದ, ಜನರ ಅನುರಕ್ತಿಯಿಂದ ರೂಪಗೊಂಡಿದೆ. ಬೇರೆಬೇರೆ ಪ್ರದೇಶಗಳಲ್ಲಿ ಬೇರೆಬೇರೆ ಜನರ ರುಚಿ, ಆಕಾಂಕ್ಷೆಗಳನ್ನು ಹಿಡಿದು ಕುಶೀಲವರು ಕಥೆಯನ್ನು ಅಷ್ಟಿಷ್ಟು ಹಿಗ್ಗಿಸಿ, ಕುಗ್ಗಿಸಿ, ಎಳೆದು, ಬಳುಕಿಸಿದ್ದಾರೆ. ವಾಲ್ಮೀಕಿ ಸಿದ್ಧಮಾಡಿದಂತೆಯೇ ಆದಿಕಾವ್ಯ ಇಂದಿಗೂ ನಿಂತಿದೆಯೆನ್ನುವುದು ಸಾಹಸದ ಮಾತು; ರಾಮಾಯಣದ ಇಂದಿನ ಸ್ವರೂಪದಲ್ಲಿ ಹತ್ತಾರು ಕುಶೀಲವರ ಕೈವಾಡ ನಿಃಸಂದೇಹವಾಗಿ ಕಾಣುತ್ತದೆ. ಇದೇ ರಾಮಾಯಣದ ವೈಶಿಷ್ಟ್ಯ. ವಾಲ್ಮೀಕಿಯೇನೋ ಆದಿಕವಿ; ನಾಡಿನ ವೀರರ ಕಥೆಯಲ್ಲಿ ನವರಸಗಳನ್ನು ಊಡಿಸಿದ ಪುಣ್ಯಾತ್ಮ ಅವನೇ. ಆದರೆ ಇಡೀ ಜನತೆ ಎತ್ತಿನಿಲ್ಲಿಸಿದ ಕಥೆ ಇದು; ಜನರೆಲ್ಲರ ಆಶೆ, ಆದರ್ಶಗಳನ್ನು ಒಳಗೊಂಡು ಅವತರಿಸಿದ ಸ್ವರೂಪ ಅದರದ್ದು. ಅದು ರೂಪಗೊಂಡಂದಿನಿಂದ ಇಂದಿನವರೆಗೂ ಜನರ ನಿತ್ಯ ಜೀವನದಲ್ಲೇ ಹಾಸುಹೊಕ್ಕಾಗಿ ಸೇರಿಕೊಂಡು ಬಂದಿದೆ. ಉಪನಿಷತ್ತು, ಭಗವದ್ಗೀತೆ, ಬಾದರಾಯಣಸೂತ್ರ ಮೊದಲಾದ ಶಾಸ್ತ್ರಪ್ರಸ್ಥಾನಗಳಂತೆ ಗಂಭೀರವಾಗಿ ದೂರ ನಿಂತು, ಬಳಿಗೆ ಬಂದವರನ್ನು ಮಾತ್ರ ಸಂತೈಸುವ ಗ್ರಂಥವಲ್ಲ ಇದು. ಎಲ್ಲರಿಗೂ ಎಲ್ಲ ಕಾಲಕ್ಕೂ ನೆರವಾಗಿ ನಿಂತ ನಾಡಕಥೆ. ದಿನನಿತ್ಯದ ಬದುಕಿನಲ್ಲಿ ದಾರಿದೀಪವಾಗಿ ನಿಲ್ಲಬಲ್ಲ ಸಾರಸ್ವತ ಸಾಮಗ್ರಿ.

ಹೀಗಾದುದರಿಂದ ರಾಮಾಯಣದಲ್ಲಿ ಹಲವಾರು ಪಾಠ ಭೇದಗಳು ಅನಿವಾರ್ಯವಾಗಿ ಒದಗಿಬಂದಿವೆ; ಪ್ರಕ್ಷಿಪ್ತಗಳು .ಅಸಂಖ್ಯಾತವಾಗಿ ಸೇರಿಕೊಂಡಿವೆ. ಪಾಂಕ್ತ ಅಥವಾ ಪ್ರಾಚೀನವೆನ್ನಬಹುದಾದ ಪಾಠವನ್ನು ಈಗ ನಿರ್ಧರಿಸುವುದೇ ಕಷ್ಟವಾಗುತ್ತದೆ. ಉಪಲಬ್ಧವಿರುವ ರಾಮಾಯಣದ ಪಾಠಗಳನ್ನೆಲ್ಲ ಸ್ಥೂಲವಾಗಿ ಪಂಡಿತರು ನಾಲ್ಕು ವರ್ಗಗಳಲ್ಲಿ ಅಡಕಮಾಡುತ್ತಾರೆ. ಈ ನಾಲ್ಕು ಪಾಠಗಳು ಭಾರತದ ಬೇರೆ ಬೇರೆ ಭಾಗಗಳಲ್ಲಿ ಪ್ರಚುರವಾಗಿವೆ. ಪಶ್ಚಿಮೋತ್ತರ ಭೂಭಾಗದ ಪಾಠ, ಬಂಗಾಳದ ಪಾಠ, ದಾಕ್ಷಿಣಾತ್ಯ ಪಾಠ ಮತ್ತು ಔದೀಚ್ಯಪಾಠ ಇವೇ ಪ್ರಮುಖವಾದ ಪಾಠಭೇದಗಳು. ಇವುಗಳಲ್ಲಿ ದಾಕ್ಷಿಣಾತ್ಯ ಮತ್ತು ಔದೀಚ್ಯ ಪಾಠಗಳು ಸುಮಾರಾಗಿ ಒಂದೇ ಎನ್ನಬಹುದು. ಈ ಪಾಠವೇ ಇಂದು ಸಾಮಾನ್ಯವಾಗಿ ದೇಶದಲ್ಲೆಲ್ಲಾ ಬಳಕೆಯಲ್ಲಿರುವುದು.



ಬೇಡನ ಬಾಣದಿಂದ ಕ್ರೌಂಚ ಮಿಥುನದಲ್ಲಿ ಒಂದರ ಸಾವು-ಇನ್ನೊಂದರ ಅಳಲು

## (೨) ಆದಿಕವಿ

ವಾಲ್ಮೀಕಿಯು ಆದಿಕವಿಯೆಂಬುದೇನೋ ನಿರ್ವಿವಾದವಾದರೂ ಅವನನ್ನು ಕುರಿತಂತೆ ನಿಖರವಾದ ವಿವರಗಳು ನಮಗೆ ದೊರೆಯಲಾರವು. ಪಲವು ಕತೆಗಳೇನೋ ಪ್ರಚಾರದಲ್ಲಿವೆ. ದಕ್ಷಿಣ ಭಾರತದಲ್ಲಿ ಬಳಕೆಯಲ್ಲಿರುವ ಕತೆ, ವಿಂಧ್ಯಪರ್ವತ ಮತ್ತು ಪೊದಿಯಲ್ ಪರ್ವತಗಳ ನಡುವೆ ಕಾಡಿನಲ್ಲಿ ಅಗಸ್ತ್ಯರು ಅಲೆದಾಡುತ್ತಿದ್ದಾಗ ಕ್ರೂರಿಯಾದ ಬೇಟೆಗಾರನನ್ನು ಕಂಡರೆಂದೂ ಅವನನ್ನು ಧರ್ಮದ ದಾರಿಯನ್ನು ಹಿಡಿಯುವಂತೆ ಮಾಡಿದರೆಂದೂ ಹೇಳುತ್ತದೆ. ಆ ಬೇಟೆಗಾರನು ನಾಮ ಜಪಮಾಡಲು ಬಯಸಿದಾಗ ಅಗಸ್ತ್ಯರು ಅವನಿಗೆ ತಿಳಿದಿದ್ದ 'ಮರ' (ತಮಿಳಿನಲ್ಲಿ 'ಮರಂ') ಎಂಬ ಮಾತನ್ನೇ ಮತ್ತೆ ಮತ್ತೆ ಉಚ್ಚರಿಸಲು ಹೇಳಿದರಂತೆ; ಅದು ಬರುಬರುತ್ತ ರಾಮ ರಾಮ (ಮರ - ಮರ ಎಂದಿದ್ದುದು) ಎಂದಾಯಿತಂತೆ. ಮತ್ತೆ ಅಗಸ್ತ್ಯರು ಅವನನ್ನು ಕಾಣಲು ಬಂದಾಗ, ಅವನಿದ್ದಲ್ಲಿ ದೊಡ್ಡದೊಂದು ಹುತ್ತ ಬೆಳೆದುಕೊಂಡಿದ್ದಿತು; ಹುತ್ತದೊಳಗಿಂದ ರಾಮನಾಮ ಜಪ ನಡೆಯುತ್ತಿತ್ತು. ಅಗಸ್ತ್ಯರು ಹುತ್ತವನ್ನು ಕೆದಕಿ ನೋಡಲು ತಪಸ್ಸಿನಲ್ಲಿ ತೊಡಗಿದ್ದ ಬೇಟೆಗಾರ ಕಾಣಿಸಿದ. ಹುತ್ತಕ್ಕೆ ಸಂಸ್ಕೃತದಲ್ಲಿ ವಲ್ಮೀಕವೆಂದು ಹೆಸರು; ಹುತ್ತದಿಂದ ಅವನು ಎದ್ದುಬಂದದ್ದರಿಂದ ಅವನನ್ನು ವಾಲ್ಮೀಕಿಯೆಂದೇ ಅಗಸ್ತ್ಯರು ಕರೆದರೆಂಬುದು ಕತೆ. ರಾಮನ ಹೆಸರನ್ನು ಹೊತ್ತು ಬೇಟೆಗಾರ ತಪಸ್ಸಿದ್ಧಿಯನ್ನು ಪಡೆದುಕೊಂಡನಾಗಿ, ಅಗಸ್ತ್ಯರು ರಾಮನ ವೃತ್ತಾಂತವನ್ನೂ ಅವನಿಗೆ ತಿಳಿಸಿದರೆಂದೂ, ಅದನ್ನೇ ಆಧಾರವಾಗಿರಿಸಿಕೊಂಡು ರಾಮಾಯಣವನ್ನು ಈಗ ಮುನಿಯಾದ ಬೇಟೆಗಾರ ರಚಿಸಿದನೆಂದೂ ಒಕ್ಕಣೆ.

ಉತ್ತರ ಭಾರತದಲ್ಲಿ ಇದೇ ಕತೆಯು ಇನ್ನೊಂದು ರೂಪವನ್ನು ತಳೆಯುತ್ತದೆ. ರಾಮನು ತನ್ನ ವನವಾಸ ಸಂದರ್ಭದಲ್ಲಿ ಅಯೋಧ್ಯೆಯಿಂದ

ಪೊರಟವನು ಚಿತ್ರಕೂಟವನ್ನು ತಲುಪುವ ಮುನ್ನ ಈಗಿನ ಆಹಾನ್ಸ್ ನದಿಯ ದಂಡೆಯ ಮೇಲಿರುವ ಲಾಲಾಪುರಕ್ಕೆ ಬಂದಾಗ, ಅಲ್ಲಿ ವಾನಪ್ರಸ್ಥ ಮುನಿಗಳು ಅವನನ್ನು ಕಂಡು, ತಮ್ಮ ನೆಮ್ಮದಿಯನ್ನು ದುಷ್ಟನಾದ ಬೇಡನೊಬ್ಬನು ಕದಡುತ್ತಿರುವುದನ್ನು ತಿಳಿಸಿ, ತಮ್ಮ ನೆರವಿಗೆ ಬರಲು ಬೇಡಿಕೊಂಡರು. ರಾಮನು ಬೇಡನನ್ನು ಕಂಡು, ಅವನಿಗೆ ಧರ್ಮಬೋಧೆ ಮಾಡಲು, ಅವನು ತಾನೂ ತಪಸ್ಸು ಮಾಡುವ ಬಯಕೆಯನ್ನು ಸೂಚಿಸಿದನು. ರಾಮನು ಅವನಿಗೆ ಜಪಮಾಡಲು ತಿಳಿಸಿದಾಗ, ಅವನು "ನನಗೆ ಯಾವ ದೇವತೆಯ ನಾಮವೂ ತಿಳಿಯದು. ನಾನು ಈವರೆಗೆ ಆಡಿರುವ ಮಾತುಗಳಲ್ಲಿ 'ಮಾರ', 'ಮಾರ' (ಎಂದರೆ "ಹೊಡಿ", "ಬಡಿ") ಎಂಬುದೇ ಹೆಚ್ಚು", ಎಂದು ಹೇಳಿದ. ಆಗ ರಾಮನು "ಸರಿ, ಅದನ್ನೇ ಮತ್ತೆ ಮತ್ತೆ ಹೇಳುತ್ತಿರು" ಎಂದು ಉಪದೇಶಿಸಿದ. ಅದೇ ರಾಮ-ರಾಮ ಎಂದಾಯಿತು. ಹದಿನಾಲ್ಕು ವರ್ಷಗಳ ನಂತರ ರಾಮನು ಇದೇ ದಾರಿಯಾಗಿ ಅಯೋಧ್ಯೆಗೆ ಹಿಂದಿರುಗುವಾಗ, ಈ ಬೇಡನನ್ನು ಕಂಡುಹೋಗುವ ಮನಸ್ಸುಮಾಡಿದ. ಆದರೆ ಬೇಡ ಇದ್ದ ಜಾಗದಲ್ಲಿ ಅವನಿಗೆ ಕಂಡದ್ದು ದೊಡ್ಡದೊಂದು ಹುತ್ತ. ಅದರೊಳಗಿಂದ 'ರಾಮ ರಾಮ' ಎಂಬ ಶಬ್ದ ಹೊರಬರುತ್ತಿದ್ದಿತು. ರಾಮನು ಹುತ್ತವನ್ನು ಒಡೆಸಿ ನೋಡಿದಾಗ ತಪಸ್ಸಿನಲ್ಲಿದ್ದ ಬೇಡನನ್ನು ಕಂಡ. ಬೇಡನೇ ಈಗ ವಾಲ್ಮೀಕಿಯೆನಿಸಿಕೊಂಡ.

ಎರಡನೆಯ ಕತೆಯಲ್ಲಿ ವಾಲ್ಮೀಕಿಯು ರಾಮನ ಕಾಲದಲ್ಲೇ ಇದ್ದವನು, ರಾಮನನ್ನು ಕಂಡಿದ್ದವನು, ರಾಮನ ಊರಿನ ಹತ್ತಿರದಲ್ಲೇ ಇದ್ದವನು. ಮೊದಲನೆಯದರಲ್ಲಿ ರಾಮನದು ಹಳೆಯ ಕತೆ. ವಾಲ್ಮೀಕಿಯು ರಾಮನಾದ ಮೇಲೆ ಎಷ್ಟೋ ಕಾಲದ ನಂತರ ಇದ್ದವನು. ರಾಮಾಯಣದ ಬಾಲಕಾಂಡದಲ್ಲಿ ವಾಲ್ಮೀಕಿಯ ಪ್ರಸ್ತಾಪ ಬರುತ್ತದೆ, ಪ್ರಸಿದ್ಧವಾದ ಕ್ರೌಂಚವಧೆಯ ಪ್ರಕರಣವೇ ಇಲ್ಲಿ ಮುಖ್ಯವಾದುದು. ವಾಲ್ಮೀಕಿಯ ಆಶ್ರಮವು ತಮಸಾನದಿಯ ದಡದ ಮೇಲಿದ್ದಿತೆಂಬ ಒಂದೇ ವಿವರ ನಮಗಿಲ್ಲಿ

ದೊರೆಯುವುದು. ತಮಸಾ (ಈಗಿನ ರೇವಾತೋನ್ಸ್) ಎಂಬ ನದಿಯ
ಅಯೋಧ್ಯೆಗೆ ಪತ್ತು ಮೈಲಿಗಳಷ್ಟು ದೂರದಲ್ಲಿ ಹರಿಯುತ್ತ ಮುಂ
ಗಂಗೆಯನ್ನು ಸೇರಿಕೊಳ್ಳುತ್ತದೆ. ಆದರೆ ಈ ಪ್ರಸ್ತಾಪದಂತೆ ವಾಲ್ಮೀಕಿಗೆ ಆ
ರಾಮನ ವಿಚಾರವೇನೂ ತಿಳಿದಿರಲಿಲ್ಲ; ಬ್ರಹ್ಮನ ಆಣತಿಯಂತೆ, ನಾರದನನ
ಕೇಳಿ ಅವನಿಂದ ರಾಮನ ಕತೆಯ ಚೌಕಟ್ಟನ್ನು ಪಡೆದುಕೊಂಡ. ಇಲ್ಲಿಯು
ರಾಮನದು ಹಳೆಯ ಕತೆ (ಪುರಾವೃತ್ತ). ಆದರೆ ಬಾಲಕಾಂಡದಲ್ಲಿ ಬರು
ಈ ಭಾಗ ಅನಂತರದ ಸೇರ್ಪಡೆಯೆಂಬುದು ಸ್ಪಷ್ಟವಾಗಿಯೇ ಇದೆ.

ಅಯೋಧ್ಯಾಕಾಂಡದಲ್ಲಿ (56, 8 - 16) ಬರುವ ನಿರೂಪ
ಹೀಗಿದೆ, ವನವಾಸಕ್ಕೆಂದು ಸೀತೆ, ಲಕ್ಷ್ಮಣ ಇವರೊಡಗೂಡಿ ರಾಮನ
ಚಿತ್ರಕೂಟಕ್ಕೆ ಬಂದಾಗ, ಅಲ್ಲಿನ ಸುಂದರ ಸನ್ನಿವೇಶವನ್ನು ಮೆಚ್ಚಿಕೊಂಡು
ಅಲ್ಲಿಯೇ ನೆಲೆಸುವ ಮನಸ್ಸುಮಾಡಿ, ಪರ್ಣಶಾಲೆಯೊಂದನ್ನು ನಿರ್ಮಿಸುವಂ
ಲಕ್ಷ್ಮಣನಿಗೆ ಹೇಳಿದ. ಈ ಸಂದರ್ಭದಲ್ಲಿ ಅವರು ಮೂವರೂ ಅಲ್ಲಿಯೆ
ಇದ್ದ ವಾಲ್ಮೀಕಿಯ ಆಶ್ರಮಕ್ಕೆ ಬರುತ್ತಾರೆ -

ಅಭಿಗಮ್ಯಾಶ್ರಮಂ ಸರ್ವೇ ವಾಲ್ಮೀಕಿಮಭಿವಾದಯನ್ ।
ತಾನ್ಮಹರ್ಷಿಃ ಪ್ರಮುದಿತಃ ॥
ಪೂಜಯಾಮಾಸ ಧರ್ಮವಿತ್।
ಆಸ್ಯತಾಮಿತಿ ಚೋವಾಚ
ಸ್ವಾಗತಂ ತು ನಿವೇದ್ಯ ಚ॥

ಬಂದವರು ವಾಲ್ಮೀಕಿಯನ್ನು ನಮಸ್ಕರಿಸುತ್ತಾರೆ. ವಾಲ್ಮೀಕಿಯು
ಅವರನ್ನು ಗೌರವದಿಂದ ಕಂಡು, ಕುಳ್ಳಿರಿಸಿ, ಸ್ವಾಗತವನ್ನು ನೀಡುತ್ತಾನೆ.

ಮಹೇಶತೀರ್ಥೀಯ ವ್ಯಾಖ್ಯಾನದಲ್ಲಿ ರಾಮಾಯಣವನ್ನು
ವಾಲ್ಮೀಕಿಯು ರಚಿಸುವಾಗ ತಮಸಾನದಿಯ ತೀರದಲ್ಲಿದ್ದನೆಂದೂ, ಅದಕ
ಮುಂಚೆ ಅವನ ಆಶ್ರಮವು ಚಿತ್ರಕೂಟದಲ್ಲಿದ್ದಿತೆಂದೂ ವಿವರಿಸುತ್ತಾರೆ
ಇದು ಹೇಗಾದರೂ ಇರಲಿ, ಷಟ್ಕಾಂಡರಾಮಾಯಣದಲ್ಲಿ ಮುಂದೆಲ್ಲಿಯೂ

ವಾಲ್ಮೀಕಿಯ ಪ್ರಸ್ತಾಪವಿರದು. ಉತ್ತರಕಾಂಡದಲ್ಲೇನೋ ಬರುತ್ತದೆ, ಆದರೆ ಅದು ಮೂಲಸ್ತರಕ್ಕೆ ಸೇರಿದ್ದಲ್ಲವಷ್ಟೆ.

ವಾಲ್ಮೀಕಿಯು ಬೇಡನಾಗಿದ್ದು ಅನಂತರ ಋಷಿಯಾದನೆಂಬುದು ಕತೆಗಳ ಸಾರಾಂಶ. ರಾಮಾಯಣವನ್ನು ರಚಿಸುವ ಮೊದಲೇ ಋಷಿಯಾಗಿದ್ದನೆಂಬುದೂ, ಆಗ ಅವನ ಕಾಣ್ಕೆಯು ತಿಳಿಯಾಗಿ ಹೊಳೆಯುತ್ತಿದ್ದರೂ, ಕ್ರೌಂಚವಧೆಯ ಸಂದರ್ಭದಲ್ಲಿ ವರ್ಣನೆ ಮಾಡಿಕೊಂಡಾಗಲೇ ಅವನು ಕವಿಯಾದದ್ದು ಎಂಬುದು ಪ್ರಾಚೀನವಾದ ಕಲ್ಪನೆ. ಹೇಮಚಂದ್ರನ 'ಕಾವ್ಯಾನುಶಾಸನ'ದಲ್ಲಿ ಭಟ್ಟತೌತನ ಈ ಮಾತನ್ನುದ್ಧರಿಸಿರುವುದಿದೆ -

'ನಾನೃಷಿಃ ಕುರುತೇ ಕಾವ್ಯಂ ಋಷಿಶ್ಚ ಕಿಲ ದರ್ಶನಾತ್ ।
ವಿಚಿತ್ರ ಭಾವಧರ್ಮಾಂಶ್ಚ ತತ್ತ್ವಪ್ರಖ್ಯಾ ಚ ದರ್ಶನಂ ॥
ಸ ತತ್ತ್ವದರ್ಶನಾದೇವ ಶಾಸ್ತ್ರೇಷು ಪಠಿತಃ ಕವಿಃ।
ದರ್ಶನಾದ್ವರ್ಣನಾದೇವ ರೂಢಾ ಲೋಕೇ ಕವಿಶ್ರುತಿಃ॥
ತಥಾ ಹಿ ದರ್ಶನೇ ಸ್ವಚ್ಛೇ ನಿತ್ಯೇऽಪ್ಯಾದಿಕವೇರ್ಮುನೇಃ।
ನೋದಿತಾ ಕವಿತಾ ಲೋಕೇ ಯಾವಜ್ಜಾತಾ ನ ವರ್ಣನಾ॥

ಸ್ಕಾಂದಪುರಾಣದ ವೈಶಾಖಮಹಾತ್ಮ್ಯೆಯಲ್ಲಿ ಇವನು ಜನ್ಮಾಂತರದಲ್ಲಿ ಬೇಡನಾಗಿದ್ದನೆಂದೂ, ಶಂಖನೆಂಬ ಮುನಿಯಿಂದ ರಾಮನಾಮದ ಜಪವನ್ನು ಉಪದೇಶವಾಗಿ ಪಡೆದುಕೊಂಡನೆಂದೂ ಒಂದು ಕತೆಯಿದೆ; ರತ್ನಾಕರನೆಂಬ ಹೆಸರಿನ ಬ್ರಾಹ್ಮಣನು ಕಾರಣಾಂತರದಿಂದ ಬೇಡನಾಗಿ, ಪಾಪಕರ್ಮಗಳನ್ನು ಮಾಡಿ, ಮತ್ತೆ ಸಪ್ತಋಷಿಗಳ ಸಹವಾಸದಿಂದ ತಪಸ್ಸಿಗೆ ತೊಡಗಿ, ಮೈಸುತ್ತ ಹುತ್ತ ಬೆಳೆಯಿತೆಂದೂ ಇನ್ನೊಂದು ಕತೆಯೂ ಇದೆ. ಹೀಗೆ ಭವಿಷ್ಯಪುರಾಣ (ಪ್ರತಿಸರ್ಗಪರ್ವ, 4, 10), ಅಧ್ಯಾತ್ಮರಾಮಾಯಣ (2, 6, 64 - 92), ಆನಂದರಾಮಾಯಣ (ರಾಜ್ಯಕಾಂಡ, 14-26), ಕೃತ್ತಿವಾಸರಾಮಾಯಣ, ತುಳಸೀದಾಸರ ರಾಮಚರಿತಮಾನಸ ಇವುಗಳಲ್ಲಿ ಇದೇ ಕಥೆಯ ಹಲವು ರೂಪಾಂತರಗಳನ್ನು ಕಾಣಬಹುದು.

ಆದರೆ ರಾಮಾಯಣದ ಉತ್ತರಕಾಂಡದಲ್ಲೇ ತಾನು ಮಾತಿನಿಂದಾಗಲಿ ಮೈಯಿಂದಾಗಲಿ ಮನಸ್ಸಿನಿಂದಾಗಲಿ ಎಂದೂ ಯಾವ ಪಾಪವನ್ನೂ ಮಾಡಿದವನೇ ಅಲ್ಲವೆಂದು ಅವನೇ ಹೇಳಿರುವುದಿದೆ (ಮನಸಾ ಕರ್ಮಣಾ ವಾಚಾ ಭೂತಪೂರ್ವಂ ನ ಕಿಲ್ಬಿಷಂ). ಮತ್ತೆ, ರಾಮನ ತಂದೆ ದಶರಥನಿಗೆ ಪ್ರಿಯಮಿತ್ರನೆಂಬ ಒಕ್ಕಣೆಯೂ ಕಾಣಸಿಗುತ್ತದೆ -

ರಾಜ್ಞೋ ದಶರಥಸ್ಯೇಷ್ಟಃ ಪಿತುರ್ಮೇ ಮುನಿಪುಂಗವಃ ।
ಸಖಾ ಪರಮತೋ ವಿಪ್ರೋ ವಾಲ್ಮೀಕಿಃ ಸುಮಹಾಯಶಾः॥

ಬಾಲಕಾಂಡದಲ್ಲಿ (4, 1) ರಾಮನಿಗೆ ಪಟ್ಟಾಭಿಷೇಕವಾದಮೇಲೆ ವಾಲ್ಮೀಕಿಯು ರಾಮಾಯಣವನ್ನು ರಚಿಸಿದ ಉಲ್ಲೇಖ ಬರುತ್ತದೆ -

'ಪ್ರಾಪ್ತರಾಜ್ಯಸ್ಯ ರಾಮಸ್ಯ ವಾಲ್ಮೀಕಿರ್ಭಗವಾನೃಷಿಃ ।
ಚಕಾರ ಚರಿತಂ ಕೃತ್ಸ್ನಂ ವಿಚಿತ್ರಪದಮಾತ್ಮವಾನ್ ॥

ಉತ್ತರಕಾಂಡವು ವಾಲ್ಮೀಕಿಯದಲ್ಲವೆಂಬುದು ಕೂಡ ಇದರಿಂದ ಸಿದ್ಧವಾಗುತ್ತದೆ; ಅದು ಬೇರೆ ಮಾತು. ಇಲ್ಲಿ ವಾಲ್ಮೀಕಿಯು ರಾಮಾಯಣರಚನೆಗೆ ಮೊದಲೇ ಪ್ರಸಿದ್ಧನಾದ ಋಷಿಯಾಗಿದ್ದನೆಂಬುದನ್ನು ತಿಳಿದರೆ ಸಾಕು. ರಾಮಾಯಣವನ್ನು ನೋಡಿದಾಗ ಕವಿಗೆ ವೈದಿಕವಾಙ್ಮಯದ ವಿಶೇಷ ಪರಿಚಯವಿದ್ದುದು ತಿಳಿಯುತ್ತದೆ, ಸಂಸ್ಕೃತಭಾಷೆಯನ್ನು ಚೆನ್ನಾಗಿ ಬಲ್ಲವನು, ಸಿಂಧು ಮತ್ತು ಬ್ರಹ್ಮಪುತ್ರಾ ನದಿಗಳ ನಡುವಣ ಪ್ರದೇಶದಲ್ಲಿ ಮತ್ತು ಹಿಮಾಲಯ ವಿಂಧ್ಯ ಪರ್ವತಗಳ ನಡುವೆ ಇರುವ ದೇಶದಲ್ಲಿ ಓಡಿಯಾಡಿದವನು, ವ್ಯಾಕರಣವನ್ನೂ ಛಂದಃಶಾಸ್ತ್ರವನ್ನೂ ಸ್ಮೃತಿಗಳನ್ನೂ ತಿಳಿದವನು ಎಂಬುದು ಸ್ಪಷ್ಟವಾಗುತ್ತದೆ. ಭರದ್ವಾಜನೇ ಮೊದಲಾದ ಶಿಷ್ಯರನ್ನು ಹೊಂದಿದ್ದ ಕುಲಪತಿಯೆಂಬುದೂ ತಿಳಿದುಬರುತ್ತದೆ (ವಿಶ್ವಾಮಿತ್ರ, ಅತ್ರಿ, ಅಗಸ್ತ್ಯರಂತೆ).

ಗೋತ್ರಪ್ರವರವನ್ನು ಆಸ್ಥೆಯಿಂದ ಅಧ್ಯಯನ ಮಾಡಿ, ವಿಸ್ತಾರವಾಗಿ ಅದರ ವಿಚಾರ ಬರೆದಿರುವ ಪಿ. ಚೆಂಚಲರಾಯರ ಪ್ರಕಾರ ವಾಲ್ಮೀಕಿಯು ವತ್ಸಗೋತ್ರದ ಮತ್ತು ಭಾರ್ಗವ, ಚ್ಯವನ, ಔರ್ವ, ಆಪ್ನವನ, ಜಾಮದಗ್ನ್ಯ ಎಂಬ ಪಂಚಾರ್ಷೇಯ ಪ್ರವರದ ಬ್ರಾಹ್ಮಣನಾಗಿದ್ದವನು. ಕೃಷ್ಣಯಜುರ್ವೇದ ಪ್ರಾತಿಶಾಖ್ಯೆಯಲ್ಲಿ (ವೈದಿಕ ವ್ಯಾಕರಣ, ಶಿಕ್ಷೆಗಳ ಶಾಖೆ) ಮೂರು ಸೂತ್ರಗಳಿಗೆ (5,36; 9,4; 18, 16) ಆಚಾರ್ಯ ಸ್ಥಾನದಲ್ಲಿದ್ದವನು ವಾಲ್ಮೀಕಿಯೆಂಬ ಉಲ್ಲೇಖವಿದೆ.

ರಾಮಾಯಣದಲ್ಲಿ ರಾಮನು ಅಯೋಧ್ಯೆಯಿಂದ ಹೊರಟು ಗಂಗೆಯ ತೀರಕ್ಕೆ ಬರುವ ಸಂದರ್ಭದಲ್ಲಿ ದಾರಿಯಾಗಿ ಬರುವ ಸ್ಥಳಗಳ ವರ್ಣನೆಯನ್ನು ನೋಡಿದರೆ, ಕವಿಯು ಅಲ್ಲಿಯೇ ಇದ್ದವನು ಎಂಬ ಭಾವನೆ ಸಹಜವಾಗಿ ಮೂಡುತ್ತದೆ; ಅಷ್ಟು ಕಣ್ಣಿಗೆ ಕಟ್ಟುವಂಥ ವರ್ಣನೆ. ಹಾಗೆಯೇ ರಾಮಾಯಣದಲ್ಲಿ ಭರತನನ್ನು ಕೇಕಯದೇಶದಿಂದ (ಈಗಿನ ಕಾಂಗಡಾ ಕಣಿವೆ) ಅಯೋಧ್ಯೆಗೆ ಕರೆತರಲು ರಾಯಭಾರಿಗಳು ಹೋದ ಪ್ರದೇಶವೂ ಕವಿಯ ನೇರವಾದ, ನಿಕಟವಾದ ಪರಿಚಯದಲ್ಲಿದ್ದಿತೆಂದು ತೋರುತ್ತದೆ.

ಆದರೆ ರಾಮನ ಕಾಲವನ್ನಾಗಲಿ ವಾಲ್ಮೀಕಿಯ ಕಾಲವನ್ನಾಗಲಿ ನಿರ್ಣಯಿಸುವುದು ಕಷ್ಟ. ಇಬ್ಬರೂ ಸಮಕಾಲಿಕರೆನ್ನಲು ಸಾಕಷ್ಟು ಆಧಾರವೇನೋ ಇರದು. ವಾಲ್ಮೀಕಿಯು ರಾಮನ ಕತೆಯನ್ನು ಬರೆಯುವ ಕಾಲಕ್ಕಾಗಲೇ ರಾಮನದ್ದು 'ಪುರಾವೃತ್ತ'ವಾದ ಆಖ್ಯಾನವಾಗಿದ್ದಿತೆಂದು ಹೇಳಬಹುದು. ವರಾಹಮಿಹಿರನ ಎಣಿಕೆಯಂತೆ ಮಹಾಭಾರತಯುದ್ಧ ನಡೆದದ್ದು ನಮ್ಮ ಕಾಲಮಾನದಲ್ಲಿ ಕ್ರಿಸ್ತಪೂರ್ವ 2012 ಎಂದು ತಜ್ಞರು ಊಹಿಸಿದ್ದಾರೆ. ಆ ಯುದ್ಧದಲ್ಲಿ ಮಡಿದ ಶ್ರುತಾಯು ಎನ್ನುವ ರಾಜನು ರಾಮನಿಂದ ಹದಿನಾಲ್ಕನೆಯ ತಲೆಯವನೆಂದು ಉಲ್ಲೇಖವಿದೆ. ಎಂದ ಮೇಲೆ ಮಹಾಭಾರತ ಸಂಗ್ರಾಮ ನಡೆದದ್ದು ರಾಮನ ಕಾಲಕ್ಕೆ ಮುನ್ನೂರು

- ನಾನ್ನೂರು ವರ್ಷಗಳು ಕಳೆದಮೇಲೆ. ಈ ವಿಚಾರವಾಗಿ ಸಂಶೋಧನೆ ನಡೆಸಿದವರು ರಾಮನಿದ್ದ ಕಾಲ ಕ್ರಿಸ್ತಪೂರ್ವ ಎರಡು ಸಾವಿರ ಐನೂರರಷ್ಟು ಎಂದು ಎಣಿಸಿದ್ದಾರೆ.

ಇವೆಲ್ಲ ಊಹಾಲೋಕದ ಐತಿಹ್ಯಗಳೇ ದಿಟ. ಆದರೆ ವಾಲ್ಮೀಕಿಯ ಕಾವ್ಯದಲ್ಲಿ ಕಂಡಬರುವ ಸಂಸ್ಕೃತ ಶೈಲಿಯನ್ನು ಗಮನಿಸಿದರೆ, ಅಲ್ಲಿರುವ ಒಕ್ಕಣೆಯನ್ನು ವಿಶ್ಲೇಷಣೆಮಾಡಿದರೆ ಕ್ರಿಸ್ತಪೂರ್ವ ಐನೂರು - ಆರುನೂರು ವರ್ಷಗಳಷ್ಟು ಹಿಂದಾಗಬಹುದು ಅಷ್ಟೆ. ರಾಮಾಯಣದ ವೃತ್ತಾಂತವೇನೋ ಇದರಿಂದ ಬಹಳ ಹಿಂದಕ್ಕೆ ಸರಿಯುತ್ತದೆ.

ಸಂಪ್ರದಾಯದಲ್ಲಿಯೂ ಇದೇ ಧೋರಣೆಯನ್ನು ಕಾಣುತ್ತೇವೆ. ಬ್ರಹ್ಮಾಂಡಪುರಾಣದ ಪ್ರಕಾರ (490ನೇ ಅಧ್ಯಾಯ) ಕೈಲಾಸದಲ್ಲಿಯೂ ವೈಕುಂಠದಲ್ಲಿಯೂ ಬಳಕೆಯಲ್ಲಿದ್ದುದು ಶತಕೋಟಿ ಪ್ರವಿಸ್ತರವಾದ 'ರಾಮಾಯಣಂ ಮಹತ್'. ಕೈಲಾಸದಲ್ಲಿ ನಂದಿಯೂ ವೈಕುಂಠದಲ್ಲಿ ವಿಷ್ವಕ್ಸೇನನೂ ಇದನ್ನು ಶ್ರವಣಮಾಡಿದ್ದರಂತೆ. ಮುಂದೆ ದೇವಲೋಕದಲ್ಲಿ ಇದು ಪಂಚಾಶತ್ ಕೋಟಿ ವಿಸ್ತೀರ್ಣವಾದ ಪ್ರಬಂಧವಾಯಿತು; ಎಂದರೆ ಅರ್ಧದಷ್ಟು ಕಡಮೆ ಪ್ರಮಾಣದ್ದಾಯಿತು. ಅನಂತರ ವಾಲಖಿಲ್ಯ ಋಷಿಗಳು ಒಂದು ಕೋಟಿ ಪ್ರಮಾಣದ ರಾಮಾಯಣವನ್ನು ಸಿದ್ಧಪಡಿಸಿದರು. ಕಡೆಯ ಹಂತದಲ್ಲಿ ಬಂದದ್ದು ವಾಲ್ಮೀಕಿಯ ಚತುರ್ವಿಂಶತ್ಸಹಸ್ರ (24,000) ಶ್ಲೋಕಗಳ ಕಾವ್ಯ. ಶಿವನೇ ಇದನ್ನು ವಾಲ್ಮೀಕಿಗೆ ತಿಳಿಸಿದನೆಂದೂ ಅಲ್ಲಿ ಉಲ್ಲೇಖವಿದೆ ('ಉಪಾದಿಶಮಹಂ ತಸ್ಯ ವಾಲ್ಮೀಕೇರ್ಭಾವಿತಾತ್ಮನಃ').

ರಾಮಾಯಣಕ್ಕಿರುವ ಮಹೇಶತೀರ್ಥೀಯ ವ್ಯಾಖ್ಯಾನದಲ್ಲಿ ಇನ್ನೊಂದು ಒಕ್ಕಣೆಯಿದೆ, ಮಾತ್ಸ್ಯಪುರಾಣವನ್ನಾಧರಿಸಿದ್ದು. ಬ್ರಹ್ಮಲೋಕ ಪ್ರಸಿದ್ಧವಾದ ರಾಮಾಯಣವನ್ನು ಭೂಲೋಕದಲ್ಲಿ ಪ್ರಚಾರಕ್ಕೆ ತರಲು ಪರಮಕಾರುಣಿಕನಾದ ಬ್ರಹ್ಮನು ವಾಲ್ಮೀಕಿಯಾಗಿ ಅವತರಿಸಿದನು. ತನ್ನ

ಗುರುವಾದ ನಾರದರಿಂದಲೇ ಭಗವತ್ಕಥೋಪದೇಶವನ್ನು ಪಡೆದುಕೊಳ್ಳಲು ಕ್ರೌಂಚವಧೆಯ ಪ್ರಸಂಗದಲ್ಲಿ ಶೋಕವನ್ನು ತಳೆದ. ಈ ಶೋಕದ ಪರಿಹಾರಕ್ಕಾಗಿ ತಾನೇ ಬ್ರಹ್ಮನಾಗಿ ಕಾಣಿಸಿಕೊಂಡು ರಾಮಾಯಣ ಕಾವ್ಯವನ್ನು ಬರೆಯಲು ಪ್ರಚೋದನೆ ಮಾಡಿದನು. ಸಾಮಗ್ರಿಯ ಸಂಗ್ರಹಕ್ಕಾಗಿ ವಾಲ್ಮೀಕಿಯು ನಾರದರ ಬಳಿ ಬಂದು ರಾಮಚರಿತೆಯನ್ನು ಕೇಳಿದ. ಪ್ರಸ್ತುತ ರಾಮಾಯಣದ ಆರಂಭವಾಗುವುದು ಹೀಗೆಯೇ.



ವಾಲ್ಮೀಕಿಯು ಕಲ್ಲೆದೆಯ ಬೇಡನಿಗೆ ಶಾಪ ಕೊಟ್ಟನು

## (೩) ಮಹಾಕಾವ್ಯ

ವಾಲ್ಮೀಕಿಯ ಆರ್ಷರಾಮಾಯಣ ದೊಡ್ಡ ಪ್ರಮಾಣದ ಗ್ರಂಥ. ಈಗ ಏಳು ಕಾಂಡಗಳು, ಐನೂರು ಸರ್ಗಗಳು ಮತ್ತು ಇಪ್ಪತ್ತನಾಲ್ಕು ಸಾವಿರ ಶ್ಲೋಕಗಳು ಇರುವ ಗ್ರಂಥ ಇದು. ಈ ವಿಸ್ತಾರವನ್ನು ಬಾಲಕಾಂಡದ ಕೆಳಗಿನ ಶ್ಲೋಕವೇ ಹೇಳುತ್ತದೆ. ಆದರೆ ಗೋವಿಂದರಾಜೀಯ ವ್ಯಾಖ್ಯಾನದ ಪ್ರಕಾರ 647 ಸರ್ಗಗಳು, 24, 253 ಶ್ಲೋಕಗಳು.

ಚತುರ್ವಿಂಶತ್ಸಹಸ್ರಾಣಿ ಶ್ಲೋಕಾನಾಮುಕ್ತವಾನೃಷಿಃ ।
ತಥಾ ಸರ್ಗಶತಾನ್ಪಂಚ ಷಟ್ಕಾಂಡಾನಿ ತಥೋತ್ತರಂ ॥

ಗಾಯತ್ರೀವರ್ಣಸಹಿತಶ್ಲೋಕಸಂಕೇತ ಎಂದಿರುವುದರಿಂದ 24,000 ಶ್ಲೋಕಗಳು (ಗಾಯತ್ರಿಯ ಒಂದೊಂದು ಅಕ್ಷರಕ್ಕೆ ಒಂದು ಸಾವಿರದಂತೆ)

ಇಷ್ಟಲ್ಲದೆ ಈ ಗ್ರಂಥವನ್ನು ಕಾವ್ಯವೆಂದು ನಿರ್ದೇಶಿಸಿದೆ. ಅದನ್ನು 'ಪಾಠ್ಯೇ ಗೇಯೇ ಚ ಮಧುರಂ', 'ಜಾತಿಭಿಃ ಸಪ್ತಭಿರ್ಯುಕ್ತಂ', 'ತಂತ್ರೀಲಯುಸಮನ್ವಿತಂ', 'ಉಪಗತಸಮಾಸಸಂಧಿಯೋಗಂ', 'ಸಮಮಧುರೋಪನಾರ್ಥವಾಕ್ಯಬದ್ಧಂ' ಎಂದು ಮುಂತಾಗಿ ಬಾಲಕಾಂಡವೇ ವರ್ಣಿಸುತ್ತದೆ. ಈ ಪ್ರಶಸ್ತಿಯೂ ಪ್ರಸಿದ್ಧವಾಗಿದೆ -

ಉದಾರವೃತ್ತಾರ್ಥಪದೈರ್ಮನೋರಮೈ -
ಸ್ತದಾಸ್ಯ ರಾಮಸ್ಯ ಚಕಾರ ಕೀರ್ತಿಮಾನ್ ।
ಸಮಾಕ್ಷರೈಃ ಶ್ಲೋಕಶತೈರ್ಯಶಸ್ವಿನೋ
ಯಶಸ್ಕರಂ ಕಾವ್ಯಮುದಾರದರ್ಶನಃ॥

ಈ ಪಾಠ್ಯರಾಮಾಯಣಕ್ಕೆ ಹಲವಾರು ಪ್ರಗಲ್ಭ ವ್ಯಾಖ್ಯಾನಗಳಿವೆ. ಇವುಗಳಲ್ಲೆಲ್ಲ ತುಂಬ ಪ್ರಸಿದ್ಧವಾದುದು ಕಂಚಿಯ ಗೋವಿಂದರಾಜನೆಂಬಾತ

ಸಿದ್ಧಪಡಿಸಿದ 'ಭೂಷಣ'ವೆಂಬ ವ್ಯಾಖ್ಯೆ. ಈತ ಶೋಲಿಂಗೂರಿನ ಶ್ರೀವೈಷ್ಣವ ಬ್ರಾಹ್ಮಣ; ಹದಿನಾರನೆಯ ಶತಮಾನದಲ್ಲಿದ್ದವನು. ಸುಪ್ರಸಿದ್ಧ ಪಂಡಿತನಾಗಿದ್ದ ನಾಗೋಜಿ ದೀಕ್ಷಿತನು 'ತಿಲಕ'ವೆಂಬ ಟೀಕೆಯನ್ನು ಬರೆದಿದ್ದಾನೆ. ನಾರಾಯಣ ತೀರ್ಥಯತಿಯ ಶಿಷ್ಯ ಮಹೇಶತೀರ್ಥರೆನ್ನುವರು 'ರಾಮಾಯಣ ತತ್ತ್ವ ದೀಪಿಕಾ' (ತೀರ್ಥೀಯ) ಎಂಬ ಟೀಕೆಯನ್ನು ಬರೆದು ಉಪಕಾರ ಮಾಡಿದ್ದಾರೆ. 'ಧರ್ಮಾಕೂತ'ವೆಂಬುದು ಇನ್ನೊಂದು ಸೊಗಸಾದ ವ್ಯಾಖ್ಯೆ. ಇದನ್ನು ಬರೆದ ತ್ರ್ಯಂಬಕ ರಾಜ ದೀಕ್ಷಿತರು ತಂಜಾವೂರಿನ ದೊರೆಗಳ ಬಳಿ ಅಧಿಕಾರಿಯಾಗಿದ್ದು, ವೃದ್ಧಾಪ್ಯದಲ್ಲಿ ಕುಂಭಕೋಣದ ಸಮೀಪದ ಸ್ವಾಮಿಮಲೆಯಲ್ಲಿ ತಪಸ್ಸುಮಾಡಿ ಮುಕ್ತರಾದವರು. ಆತ್ರೇಯ ಗೋತ್ರದ ಅಹೋಬಲಸ್ವಾಮಿಗಳು 'ವಾಲ್ಮೀಕಿ ಹೃದಯ'ವೆಂಬ ವ್ಯಾಖ್ಯಾನವನ್ನು ನಿರ್ಮಿಸಿದ್ದಾರೆ. ರಾಮಾಯಣದಲ್ಲಿ ಕಷ್ಟವೆನಿಸಿದ ಘಟ್ಟಗಳನ್ನು ಎತ್ತಿಕೊಂಡು ದೇವರಾಮಭಟ್ಟನೆಂಬುವನು 'ರಾಮಾಯಣ ವಿಷಮಪದಾರ್ಥ ವ್ಯಾಖ್ಯಾನ'ವನ್ನು ಸಿದ್ಧಪಡಿಸಿದ್ದಾನೆ.

ಕಿಡಾಂಬಿ ರಂಗಾಚಾರ್ಯನ, 'ರಾಮಾಯಣಾನ್ವಯೀ', ಪ್ರಬಲ ಮುಕುಂದಸೂರಿಯ 'ರಾಮಾಯಣಭೂಷಣ', ಅಭಿನವ ರಾಮ-ಭದ್ರಾಶ್ರಮಿಯ 'ಸುಬೋಧಿನೀಟೀಕಾ', ಚೋಳಪಂಡಿತ ಬ್ರಹ್ಮಾಧಿರಾಜನ 'ರಾಮಾಯಣಸಾರಸಂಗ್ರಹ', ಅಪ್ಪಯ್ಯ ದೀಕ್ಷಿತರ 'ರಾಮಾಯಣ ತಾತ್ಪರ್ಯ ನಿರ್ಣಯ', ಹರಿಪಂಡಿತನ 'ಗುರು ವಾಲ್ಮೀಕಿ ಭಾವಪ್ರಕಾಶಿಕಾ', ವೇಂಕಟೇಶ್ವರನ 'ಸರ್ವಾರ್ಥಸಾರ', ರಾಮಾನಂದ ತೀರ್ಥರ 'ರಾಮಾಯಣ ಕೂಟವಾಖ್ಯೆ'; ಇವಲ್ಲದೆ 'ರಾಮಾಯಣಸೇತು', 'ಶೃಂಗಾರ ಸುಧಾಕರ', ಚತುರರ್ಥದೀಪಿಕಾ', 'ರಾಮಾಯಣವಿರೋಧ ಪರಿಹಾರ', 'ತಾತ್ಪರ್ಯತರಣಿ' ಹೀಗೆ ನೂರಾರು ಸಂಸ್ಕೃತ ವ್ಯಾಖ್ಯಾನಗಳು ಪ್ರಚಲಿತವಾಗಿವೆ.

ಇಂದಿನ ರಾಮಾಯಣ ಎಂದು ರೂಪ ತಳೆಯಿತೆಂದು ಹೇಳುವುದು ಕಷ್ಟ. ಕ್ರಿಸ್ತಪೂರ್ವ ಐದಾರನೆಯ ಶತಮಾನದ ಸುಮಾರಿಗೆ ವಾಲ್ಮೀಕಿ ತನ್ನ ಆದಿಕಾವ್ಯವನ್ನು ಸಿದ್ಧಪಡಿಸಿದನೆಂದೂ, ಕ್ರಿಸ್ತಾಬ್ದ ಮೂರನೆಯ ಶತಮಾನದ ಸುಮಾರಿಗೆ ಇಂದು ಬಳಕೆಯಲ್ಲಿರುವ ಪಾಠ ಪ್ರವರ್ತಿತವಾಯಿತೆಂದೂ ಹಲವು ವಿದ್ವಜ್ಜನರ ಊಹೆ. ಕ್ರಿಸಾಬ್ದ ಎರಡನೆಯ ಶತಮಾನದ್ದಾದ 'ಕಲ್ಪಮಂಡೀಟೀಕಾ' ಎಂಬ ಗ್ರಂಥದಲ್ಲಿ (ಕುಮಾರಲಾತ ಬರೆದದ್ದು) ರಾಮಾಯಣ ಪಠಣ ಸಾರ್ವಜನಿಕವಾಗಿ ನಡೆಯುತ್ತಿದ್ದ ಉಲ್ಲೇಖವಿದೆ. ಇದನ್ನು ಡಾ|| ವಿಂಟರ್‌ನಿಟ್ಸ್ ಪ್ರಸ್ತಾಪಿಸಿದ್ದಾರೆ. ಇಂದಿನ ಪಾಠದಲ್ಲಿ ವಾಲ್ಮೀಕಿ ಹೇಳಿದ ಕಥೆ ಎಷ್ಟು, ಕಾಲಕಾಲಕ್ಕೆ ಸೇರಿಕೊಂಡು ಬಂದ ಭಾಗ ಎಷ್ಟು ಎಂದು ನಿರ್ಧರಿಸುವ ಪ್ರಯತ್ನವೂ ನಡೆದಿದೆ. ಖಚಿತವಾಗಿ ಏನನ್ನೂ ಹೇಳುವುದು ಸಾಧ್ಯವಿಲ್ಲ, ನಿಜ. ಆದರೆ ಕೆಲವು ವಿವರಗಳು ತಾವಾಗಿ ಸ್ಪಷ್ಟವಾಗುತ್ತವೆ. ನಿದರ್ಶನಕ್ಕೆ ಬಹುಮಟ್ಟಿಗೆ ಬಾಲಕಾಂಡ, ಇಡೀ ಉತ್ತರಕಾಂಡ ವಾಲ್ಮೀಕಿಯದಲ್ಲವೆಂಬುದು. ವಾಲ್ಮೀಕಿಯ ಪ್ರಸ್ತಾಪದಿಂದಲೇ ಅಪ್ರಾಕೃತವಾಗಿ ಆರಂಭವಾಗುವ ಬಾಲಕಾಂಡದಲ್ಲಿ ರಾಮಾಯಣದ ಎರಡು ವಿಭಿನ್ನ ಸಂಗ್ರಹಸರ್ಗಗಳಿವೆ, ವಾಲ್ಮೀಕಿಯ ಶೋಕವು ಶ್ಲೋಕವಾಗಿ ಮಾರ್ಪಟ್ಟ ಪ್ರಸಂಗವಿದೆ. ಉತ್ತರ ಕಾಂಡವನ್ನು ಬಿಟ್ಟರೆ ಉಳಿದ ಯಾವ ಕಾಂಡದಲ್ಲೂ ಕಾಣಬರದ ಉಪಕಥೆಗಳ ಸಂಭ್ರಮವಿದೆ. ಈ ಕಾಂಡದ ಕಥಾಸಂಗ್ರಹ-ಸರ್ಗಗಳಲ್ಲಿ ಬಾಲಕಾಂಡದ ವೃತ್ತಾಂತಗಳು ಸೇರಿಲ್ಲದಿರುವುದು ಸ್ವಾರಸ್ಯವಾದ ವಿವರ. ಬಾಲಕಾಂಡವಲ್ಲಿ ಬರುವ ಅಯೋಧ್ಯಾ ವರ್ಣನೆ, ದಶರಥನ ಅಶ್ವಮೇಧಯಾಗ, ರಾಮಜನ್ಮ , ವಿವಾಹ ಮುಂತಾದ ವಿವರಗಳನ್ನು ಉಳಿದ ಕಾಂಡಗಳು ಎಲ್ಲೂ ಉಲ್ಲೇಖಿಸುವುದಿಲ್ಲ.

ಅಷ್ಟು ಮಾತ್ರವಲ್ಲ. ಬಾಲಕಾಂಡದ ನಿರೂಪಣೆ, ಉಳಿದ ಕಾಂಡಗಳ ನಿರೂಪಣೆ, ಪರಸ್ಪರ ವಿರುದ್ಧವಾಗಿರುವುದೂ ಉಂಟು. ಉದಾಹರಣೆಗೆ ಬಾಲಕಾಂಡವಲ್ಲಿ ಲಕ್ಷ್ಮಣ ಊರ್ಮಿಳೆಯನ್ನು ಮದುವೆಯಾಗಿ ಅಯೋಧ್ಯೆಗೆ

ಆವಳನ್ನು ಕರೆತರುವ ವಿವರವಿದೆ. ಆದರೆ ಮುಂದೆಲ್ಲೂ ಊರ್ಮಿಳೆಯ ಮಾತೇ ಇಲ್ಲ. ಲಕ್ಷ್ಮಣ ಕಾಡಿಗೆ ಹೊರಡುವಾಗಲೂ ಊರ್ಮಿಳೆಯ ವಿಚಾರವಿಲ್ಲ. ಲಕ್ಷ್ಮಣ ಕಾಡಿಗೆ ಬರದೆ ಅಯೋಧ್ಯೆಯಲ್ಲೇ ಇರಬೇಕೆನ್ನಲು ಹಲವಾರು ಕಾರಣಗಳನ್ನು ಹೇಳುವ ರಾಮ ಊರ್ಮಿಳೆಯ ಹೆಸರನ್ನೇ ಎತ್ತುವುದಿಲ್ಲ. ಅಷ್ಟು ಮಾತ್ರವಲ್ಲ, ಅರಣ್ಯಕಾಂಡದಲ್ಲಿ ಶೂರ್ಪನಖಿ ರಾಮನನ್ನು ಮದುವೆಯಾಗೆಂದು ಕಾಡಿದಾಗ ರಾಮ ಆಕೆಯನ್ನು ಲಕ್ಷ್ಮಣನ ಬಳಿಗೆ ಕಳುಹಿಸುತ್ತ 'ಅವನನ್ನು ಕೇಳು, ಅವನಿಗಿನ್ನೂ ಮದುವೆಯಾಗಿಲ್ಲ (ಅಕೃತದಾರ)' ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಹಾಸ್ಯಕ್ಕಾದರೂ ವಾಲ್ಮೀಕಿಯ ರಾಮ ಸುಳ್ಳುಹೇಳಲಾರನಷ್ಟೆ?

''ಅನೃತಂ ನಹಿ ರಾಮಸ್ಯ ಕದಾಚಿದಪಿ ಸಂಮತಂ''

ಉತ್ತರಕಾಂಡವಂತೂ ವಾಲ್ಮೀಕಿಗೆ ನಾಚಿಕೆ ತರುವಂಥ ಸುಳ್ಳಿನ ಕಂತೆ. ಇದನ್ನು ಬರೆದು ಸೇರಿಸಿದ ಕವಿಗೆ ಔಚಿತ್ಯ ಜ್ಞಾನವೇ ಇಲ್ಲ. ರಾಮನ ವ್ಯಕ್ತಿತ್ವದ ಘನತೆ - ಗಾಂಭೀರ್ಯಗಳಿಗೆ ಈ ಕಥಾಭಾಗದಲ್ಲಿ ನಿಃಸಂದೇಹವಾಗಿ ಕುಂದುಬಂದಿದೆ. ಧೀರೋದಾತ್ತ ನಾಯಕನಾದವನು, ಲೋಕೋತ್ತರ-ಚಾರಿತ್ರ್ಯವುಳ್ಳವನು ಮಾಡಲಾರದುದನ್ನು, ಮಾಡಬಾರದುದನ್ನು ಉತ್ತರಕಾಂಡ ಮಾಡಿಸುತ್ತದೆ. ಒಂದು ಕಾಲಕ್ಕೆ ಪ್ರಚುರವಾಗಿದ್ದ ರಾಮನ ಕಥೆಯಲ್ಲಿ ಈ ಉತ್ತರ ಚರಿತೆ ಇರಲಿಲ್ಲವೆಂಬುದು ಸ್ಫುಟವಾಗುತ್ತದೆ. ಬಾಲಕಾಂಡದಲ್ಲಿ ಬರುವ ಮೊದಲನೆಯ ಕಥಾಸಂಗ್ರಹದಲ್ಲಿ ಉತ್ತರಕಾಂಡದ ವಿವರಗಳ ಪ್ರಸ್ತಾಪವೇ ಇಲ್ಲ. ಎರಡನೆಯ ಕಥಾಸಂಗ್ರಹದಲ್ಲಿ ''ವೈದೇಹಿಯ ವಿಸರ್ಜನೆ''ಯೆಂದಷ್ಟೇ ಹೇಳಿ 'ಅನಾಗತಂ ಚ ಯತ್ ಕಿಂಚಿತ್' ಎಂದು ವಿವರಿಸಿಯೂ ಇರುವುದು ಸ್ವಾರಸ್ಯವಾಗಿದೆ. ಬಾಲಕಾಂಡದ ನಾಲ್ಕನೆಯ ಸರ್ಗದಲ್ಲಿ ರಾಮಾಯಣಕಾವ್ಯದ ಪ್ರಸ್ತಾಪ ಬಂದಾಗ 'ಷಟ್ ಕಾಂಡಾನಿ' ಎಂದು ಸ್ಪಷ್ಟವಾಗಿ ಹೇಳಿದೆ. ಮಹಾಭಾರತದಲ್ಲಿ ಬರುವ

ರಾಮೋಪಾಖ್ಯಾನ'ದಲ್ಲಿ ಕೂಡ ಕಥೆ ರಾಮ ಪಟ್ಟಾಭಿಷೇಕದಲ್ಲೇ ಪರ್ಯವಸಾನವಾಗುತ್ತದೆ.

ರಾಮನ ಕಥೆ ಸಹಜವಾಗಿ ಆರನೆಯ ಯುದ್ಧಕಾಂಡದಲ್ಲಿ (ಇದನ್ನು ಲಂಕಾಕಾಂಡವೆಂದೂ ಕರೆಯುತ್ತಾರೆ) ಮುಕ್ತಾಯವಾಗುತ್ತದೆ. ಕಾಂಡಸಮಾಪ್ತಿಯಲ್ಲಿ ಗ್ರಂಥ ಮುಗಿಯಿತೆಂದು ಸೂಚಿಸುವ ಫಲಶ್ಲೋಕಗಳೂ ಉಂಟು. ಹಿಂದೆಯೇ ಹೇಳಿರುವಂತೆ,

ದಶವರ್ಷಸಹಸ್ರಾಣಿ ದಶವರ್ಷ ಶತಾನಿ ಚ।
ಭ್ರಾತೃಭಿಃ ಸಹಿತಃ ಶ್ರೀಮಾನ್ ರಾಮೋ ರಾಜ್ಯಮಕಾರಯತ್॥

ಎಂಬ ಶ್ಲೋಕವೇ ಕಾವ್ಯದ ಪರಿಸಮಾಪ್ತಿ ಎಂದು ಸ್ಪಷ್ಟವಾಗುತ್ತದೆ. ಇಲ್ಲಿಂದ ಮುಂದೆ "ಆದಿಕಾವ್ಯಮಿದಂ ತ್ವಾರ್ಷಂ ಪುರಾ ವಾಲ್ಮೀಕಿನಾ ಕೃತಂ" ಇತ್ಯಾದಿಯಾಗಿ ಕಾವ್ಯಪ್ರಶಸ್ತಿ, ಫಲಶ್ಲೋಕಗಳು ಬರುತ್ತವೆ.

ಯುದ್ಧಕಾಂಡದಲ್ಲಿ ಸತ್ತ ರಾವಣ ಉತ್ತರಕಾಂಡದಲ್ಲಿ ಮತ್ತೆ ಹುಟ್ಟಿಕೊಳ್ಳುತ್ತಾನೆ; ಅವನ ಕಥೆಯೆಲ್ಲ ವಿಸ್ತಾರವಾಗಿ ಬರುತ್ತದೆ; ಅನರಣ್ಯ, ನಲಕೂಬರ, ವಾಲಿ, ರಂಭೆ ಇವರ ವೃತ್ತಾಂತವೆಲ್ಲ ಬರುತ್ತದೆ; ಹನುಮಂತನ ಜನ್ಮವೃತ್ತಾಂತ ಅನವಶ್ಯವಾಗಿ ಇಲ್ಲಿ ಮೊದಲಬಾರಿಗೆ ಕಾಣಿಸಿಕೊಳ್ಳುತ್ತದೆ; ಸೀತಾಪರಿತ್ಯಾಗವಂತೂ ಪ್ರಮುಖವಾಗಿ ಬರುತ್ತದೆ. ರಾಮದ ಕಥೆಗೂ ಈ ಕಾಂಡದ ಪ್ರಸಂಗಗಳಿಗೂ ಸಂಬಂಧವೇ ಇಲ್ಲ, ಶೈಲಿಯಲ್ಲೂ ವೈಪರೀತ್ಯವುಂಟು. ಉಳಿದ ಕಾಂಡಗಳಲ್ಲಿರುವ ನಿರೂಪಣೆಯ ಓಘ, ಅನಗತ್ಯವಾದ, ಅಪ್ರಸ್ತುತವಾದ ಕಥೆಗಳಿಂದ, ಉಪಕಥೆಗಳಿಂದ ಇಲ್ಲಿ ಒಡೆದಿದೆ.

ಉತ್ತರಕಾಂಡ ಕ್ರಿಸ್ತಾಬ್ದ ನಾಲ್ಕನೆಯ ಶತಮಾನದನಂತರ ಸಿದ್ಧವಾಯಿತೆಂದು ಹಲವು ಪಂಡಿತರ ಎಣಿಕೆ. ಪದ್ಮಪುರಾಣದ ಪ್ರಭಾವ

ಈ ಕಾಂಡದಲ್ಲಿ ಕಾಣುತ್ತದೆ; ಈ ಪುರಾಣ ಕ್ರಿಸ್ತಾಬ್ದ 330ರ ಸುಮಾರಿಗೆ ರೂಪುಗೊಂಡಿತೆನ್ನುತ್ತಾರೆ. ಪದ್ಮ ಪುರಾಣದ ಪಾತಾಳಖಂಡವೆಂಬ ಪರಿಚ್ಛೇದದಲ್ಲಿ (330-4340) ರಾಮನ ವಿಜಯದಿಂದ ಪಟ್ಟಾಭಿಷೇಕದವರೆಗಿನ ವೃತ್ತಾಂತಗಳು, ರಾಮನು ಮಾಡಿದ ಅಶ್ವಮೇಧಯಾಗ, ಲವಕುಶರೊಂದಿಗೆ ನಡೆದ ಸಮರ, ಮುಂತಾದ ವಿವರಗಳನ್ನೆಲ್ಲ ಹೇಳಿದ್ದಾರೆ. ಈ ವಿವರಗಳನ್ನೇ ವಿಸ್ತರಿಸಿ ಉತ್ತರಕಾಂಡವನ್ನು ರಚಿಸಿದಂತೆ ತೋರುತ್ತದೆ. ಕ್ರಿಸ್ತಾಬ್ದ ಒಂದೆರಡನೆಯ ಶತಮಾನಗಳಲ್ಲಿ ವಾಲ್ಮೀಕಿ ರಾಮಾಯಣ ಜಾವಾದ್ವೀಪದ ಕವಿಭಾಷೆಗೆ ಪರಿವರ್ತಿತವಾಯಿತು; ಇದರಲ್ಲಿ ಉತ್ತರಕಾಂಡವು ಸೇರಿಲ್ಲದಿರುವುದು ಗಮನಾರ್ಹವಾಗಿದೆ. ಅವರ ಸಂಪ್ರದಾಯದಲ್ಲಿ ಉತ್ತರಕಾಂಡವು ರಾಮಾಯಣದಲ್ಲಿ ಸೇರದೆ ಸ್ವತಂತ್ರಗ್ರಂಥವಾಗಿ ಉಳಿದಿದೆ. ಚೀಣೀ ಭಾಷೆಯಲ್ಲಿ ಕ್ರಿಸ್ತಾಬ್ದ ಮೂರನೆಯ ಶತಮಾನದಲ್ಲಿ ರಾಮಾಯಣದ ಒಂದು ಪ್ರಾಚೀನ ಪಾಠ ಸಿದ್ಧವಾಗಿದೆ; ಇದನ್ನು ಪ್ರೊ॥ ಹ್ಯುಬರ್ ಎಂಬ ಪಂಡಿತರು ಸಂಶೋಧನೆ ಮಾಡಿ ಪ್ರಕಟಿಸಿದ್ದಾರೆ; ಈ ಪಾಠದಲ್ಲಿ ಕೂಡ ಉತ್ತರಕಾಂಡದ ಕಥಾಭಾಗ ಸೇರಿಲ್ಲ, ಸೀತೆಯ ಅಗ್ನಿಪರೀಕ್ಷೆಯೊಂದಿಗೆ ಈ ನಿರೂಪಣೆ ಮುಗಿಯುತ್ತದೆ. ಅನ್ನಾಂ ದೇಶದಲ್ಲಿ ಪ್ರಚುರವಾಗಿರುವ ರಾಮಾಯಣವೂ ಯುದ್ಧಕಾಂಡದಲ್ಲೇ ಸಮಾಪ್ತವಾಗುತ್ತದೆ.

ಉಳಿದ ಕಾಂಡಗಳಲ್ಲಿಯೂ ಅಲ್ಲಲ್ಲಿ ಪ್ರಕ್ಷಿಪ್ತವಾದ ಭಾಗಗಳಿವೆ. ನಿದರ್ಶನಕ್ಕೆ, ಯುದ್ಧಕಾಂಡದಲ್ಲಿ ಸೀತೆಯ ಅಗ್ನಿಪರೀಕ್ಷೆಯ ಪ್ರಸಂಗ. ಸೀತೆಯ ನಡತೆಯನ್ನು ಶಂಕಿಸಿ ('ಪ್ರಾಪ್ತ ಚಾರಿತ್ರಸಂದೇಹಾ') ಆಕೆಗೆ ಲಕ್ಷ್ಮಣನನ್ನೋ, ವಿಭೀಷಣನನ್ನೋ, ಸುಗ್ರೀವನನ್ನೋ ಆರಿಸಿಕೊಂಡು ಬಾಳೆಂದು ರಾಮ ಹೇಳುವ ಸನ್ನಿವೇಶ ದಾರುಣವಾದದ್ದು; ರಾಮನ ವ್ಯಕ್ತಿತ್ವಕ್ಕೆ, ಕಾವ್ಯದ ಗಾಂಭೀರ್ಯಕ್ಕೆ, ಅನುವಾದದ್ದಲ್ಲ. ಈ ಸಂದೇಹನಿವೃತ್ತಿಗಾಗಿ ಪ್ರಸಕ್ತವಾದ ಅಗ್ನಿಪರೀಕ್ಷೆಯೂ ಪ್ರಾಚೀನಪಾಠದಲ್ಲಿ ಇದ್ದಿರಲಾರದು. ಬಾಲಕಾಂಡದ ಕಥಾಸಂಗ್ರಹ ಸರ್ಗಗಳಲ್ಲಿ ಅಗ್ನಿಪರೀಕ್ಷೆಯ ಉಲ್ಲೇಖವಿಲ್ಲ. ಉತ್ತರಕಾಂಡದಲ್ಲಿ

ಸೀತೆಯ ಮೇಲೆ ಲೋಕೋಪವಾದ ಎರಗಿದಾಗಲೂ ಅಗ್ನಿಪರೀಕ್ಷೆಯಿಂದ ಮೊದಲೇ ಸೀತೆ ಶುದ್ಧಳಾಗಿದ್ದಳೆಂಬ ಪ್ರಸ್ತಾಪವಿಲ್ಲ. ಮಹಾಭಾರತದ 'ರಾಮೋಪಾಖ್ಯಾನ'ವಾಗಲಿ ವಾಲ್ಮೀಕಿ ರಾಮಾಯಣದ ಬಂಗಾಳ ಪಾಠವಾಗಲಿ ಇದನ್ನು ಹೇಳುವುದಿಲ್ಲ.

ರಾಮನ ಮನೋಧರ್ಮವನ್ನು ಬಲ್ಲವರಿಗೆ, ಸೀತಾ - ರಾಮರ ದಾಂಪತ್ಯ ಪ್ರವೃತ್ತಿಯನ್ನು ಅರಿತವರಿಗೆ, ವಾಲ್ಮೀಕಿಯ ಹೃದಯವನ್ನು ತಿಳಿದವರಿಗೆ ಈ ಸನ್ನಿವೇಶ ಸರಿಯೆನಿಸುವುದಿಲ್ಲ. ಸೀತೆಯೇನೋ 'ರಾವಣಾಂಕಪರಿಕ್ಲಿಷ್ಟೆ', 'ದೃಷ್ಟಾ ದುಷ್ಟೇನ ಚಕ್ಷುಷಾ'. ಆದರೆ ಇಷ್ಟು ಮಾತ್ರಕ್ಕೆ ರಾಮ ಕಠಿನನಾಗಿ, ರೋಷದಿಂದ ಸೀತೆಗೆ "ನಾಸ್ತಿ ಮೇ ತ್ವಯ್ಯಭಿಷ್ವಂಗಃ, ಯಥೇಷ್ಟಂ ಗಮ್ಯತಾಂ" ಎಂದು ಹೇಳಿಯಾನೆಂದು ಯಾವ ಸಹೃದಯನೂ ನಿರೀಕ್ಷಿಸುವುದಿಲ್ಲ. 'ಮಿಥ್ಯಾವಾದೋಪಹತ'ಳಾಗಿ ಸೀತೆ ಬೆಂಕಿಗೆ ಬಿದ್ದರೆ, ಬ್ರಹ್ಮನು ಬಂದು ರಾಮನಿಗೆ

"ಸೀತಾ ಲಕ್ಷ್ಮೀರ್ಭವಾನ್ ವಿಷ್ಣುಃ....
ವಧಾರ್ಥಂ ರಾವಣಸ್ಯೇಹ ಪ್ರವಿಷ್ಟೋ ಮಾನುಷೀಂ ತನೂಂ"

ಎಂದು ನೆನಪು ಮಾಡಿಕೊಡುವುದು ಹಾಸ್ಯಾಸ್ಪದವಾಗಿದೆ. ಇದನ್ನು ಹೇಳುವ 118ನೆಯ ಸರ್ಗದ ಕೊನೆಯಲ್ಲಿ ಒಂದು ಫಲಶ್ಲೋಕವನ್ನೂ ಸೇರಿಸಿ ಪ್ರಕ್ಷಿಪ್ತವಾದುದನ್ನು ಸಮರ್ಥಿಸಿದ್ದಾರೆ!

ಯುದ್ಧಕಾಂಡದಲ್ಲಿ ಬರುವ ಯುದ್ಧನಿರೂಪಣೆಯಲ್ಲೂ ಪ್ರಕ್ಷಿಪ್ತವಾದ ಭಾಗಗಳು ಹಲವಾರು ಸೇರಿಕೊಂಡಿವೆ. ಇಂದ್ರಜಿತನ ಮರಣಕ್ಕೆ ಮುಂಚೆ ಯುದ್ಧ ನಡೆದದ್ದು ಮೂರು ದಿನಗಳು ಮಾತ್ರ (ಅಹೋರಾತ್ರೈಸ್ತ್ರಿಭಿಃ) ಎಂದು ರಾಮಾಯಣದಲ್ಲೇ ಸ್ಪಷ್ಟವಾಗಿ ಹೇಳಿದೆ; ಮರುದಿವಸವೇ ರಾವಣ ಸತ್ತದ್ದು. ಒಟ್ಟು ನಾಲ್ಕು ದಿನಗಳ ಯುದ್ಧ ಅಷ್ಟೆ. ಮೊದಲದಿನ ಸಾಮಾನ್ಯ ಕದನ; ಇಂದ್ರಜಿತ್ತು ರಾಮಲಕ್ಷ್ಮಣರನ್ನು ಬಂಧಿಸಿದ್ದು, ಎರಡನೆಯ ದಿನ ರಾಕ್ಷಸರು

ಪರಾಜಯಗೊಂಡು ಓಡಿದಾಗ ಕುಂಭಕರ್ಣ ಯುದ್ಧರಂಗದಲ್ಲಿ ಕಾಣಿಸಿಕೊಂಡದ್ದು; ಮರುದಿನ ಇಂದ್ರಜಿತ್ತು ಹೋರಾಡಿ ಸತ್ತದ್ದು. ಇದಾದ ಮರುದಿನವೇ ರಾವಣನ ಮರಣ. ಆದರೆ ಅರವತ್ತು ಸರ್ಗಗಳಲ್ಲಿ ಇರುವ ಅದ್ಭುತವೃತ್ತಾಂತಗಳ ವರ್ಣನೆ ಸಮಂಜಸವಾಗಿ ಕಾಣುವುದಿಲ್ಲ. ಬಾಲಕಾಂಡದ ಸಂಗ್ರಹರಾಮಾಯಣದಲ್ಲೂ 'ತೇನ ಗತ್ವಾ ಪುರೀಂ ಲಂಕಾಂ ಹತ್ವಾ ರಾವಣಮಾವಹೇ' ಎಂದಷ್ಟೇ ಸರಳವಾಗಿ ಹೇಳಿದೆ. ಯಾವುದೋ ಕಾಲದ ಕುಶೀಲವರು ಕವಿಸಮಯವನ್ನು ಬಳಸಿಕೊಂಡು ಕೇಳುವವರಲ್ಲಿ ವೀರರಸವನ್ನು ತುಂಬಿಸಲು ಯುದ್ಧಕಾಂಡವನ್ನು ಅತಿಯಾಗಿ ವಿಸ್ತರಿಸಿದ್ದಾರೆ.

ಹೀಗೆ ವಾಲ್ಮೀಕಿಯ ಕಾವ್ಯದಲ್ಲಿ ಕಾಲಕಾಲಕ್ಕೆ ಹೊಸ ಹೊಸ ಭಾಗಗಳನ್ನು ಸೇರಿಸಿರುವುದು ಸ್ಪಷ್ಟವಾಗಿದೆ. ಬಾಲಕಾಂಡದಲ್ಲೂ ಯುದ್ಧಕಾಂಡದಲ್ಲೂ ಪ್ರಕ್ಷಿಪ್ತವಾದ ಭಾಗಗಳು ಹಲವಾರು ಇವೆ; ಇಡೀ ಉತ್ತರಕಾಂಡವೇ ಅನಂತರ ಸೇರಿಸಿದ್ದು. ಅಯೋಧ್ಯಾ, ಅರಣ್ಯ, ಕಿಷ್ಕಿಂಧಾ, ಸುಂದರಕಾಂಡಗಳು ಸಾಮಾನ್ಯವಾಗಿ ಇದ್ದ ಹಾಗೆಯೇ ಇವೆಯೆನ್ನಬಹುದು. ಇವುಗಳಲ್ಲಿ ಸ್ಥೂಲವಾಗಿ ಒಂದು ಏಕಸೂತ್ರವುಂಟು; ನಿರೂಪಣೆ ಅವ್ಯಾಹತವಾಗಿ ಸಾಗಿದೆ; ಅಸಂಬದ್ಧವಾದ ಪ್ರಸಂಗಗಳು ಅಷ್ಟಾಗಿ ಬರುವುದಿಲ್ಲ.

## (೪) ಇತಿಹಾಸದ ಹಿನ್ನೆಲೆ

ನಮ್ಮವರು ರಾಮಾಯಣವನ್ನು ಕಾವ್ಯವೆಂದೂ ಮಹಾಭಾರತವನ್ನು ಇತಿಹಾಸವೆಂದೂ ಪರಿಗಣಿಸಿದ್ದಾರೆ. ಇದರಿಂದ ಭಾರತವೃತ್ತಾಂತ ನಿಜವಾಗಿ ನಡೆದದ್ದೆಂದೂ, ರಾಮಾಯಣದ ಕಥೆ ಕೇವಲ ಕಾಲ್ಪನಿಕವೆಂದೂ, ಕೆಲವು ಪಾಶ್ಚಾತ್ಯಪಂಡಿತರು ಊಹಿಸಲು ಅವಕಾಶವಾಗಿದೆ.

ಆದರೆ ರಾಮನಿದ್ದನೆಂದೂ ರಾಮ-ರಾವಣರ ಯುದ್ಧವಾಯಿತೆಂದೂ ಸಂಪ್ರದಾಯ ಸಂದೇಹಪಡುವುದಿಲ್ಲ. ರಾಮನ ಚರಿತ್ರೆ ವಾಲ್ಮೀಕಿಯ ಕಾವ್ಯಕ್ಕೆ ವಸ್ತುವಾಯಿತೇ ವಿನಾ ರಾಮನ ಕಥೆಯೇ ವಾಲ್ಮೀಕಿಯ ಸ್ವಕಪೋಲಕಲ್ಪಿತವಲ್ಲ. ವಾಲ್ಮೀಕಿಯ ಕಾವ್ಯಕ್ಕೂ ಮುಂಚೆ ರಾಮನ ಕಥೆ ಪ್ರಚಲಿತವಾಗಿದ್ದಿತು. ಇತಿಹಾಸವೆನಿಸಿದ ಮಹಾಭಾರತದಲ್ಲೂ ರಾಮನ ಉಪಾಖ್ಯಾನವಿದೆಯಲ್ಲವೆ? ರಾಮನ ಕಥೆಗೆ ರಾಮಾಯಣವಲ್ಲದೆ ಸ್ವತಂತ್ರವಾದ ಉಲ್ಲೇಖಗಳು ಬೌದ್ಧರ ಜಾತಕ ಸಾಹಿತ್ಯದಲ್ಲೂ ಇತರೆಡೆಗಳಲ್ಲೂ ಬರುತ್ತವೆ.

ರಾಮಾಯಣವು ಕಾವ್ಯವೇನೋ ನಿಜ; ಅದರಲ್ಲಿ ಕಾವ್ಯಧರ್ಮವನ್ನನುಸರಿಸಿ ಉತ್ಪ್ರೇಕ್ಷೆಗಳೂ ಅದ್ಭುತ ನಿರೂಪಣೆಗಳೂ ಉಂಟು. ಸಣ್ಣ ಕಥೆಯನ್ನು ರಸವಿಡಿದು ದೊಡ್ಡದು ಮಾಡಿರುವುದು ದಿಟ; ಹಲವೆಡೆ ರಸಪೋಷಣೆಯ ಸಲುವಾಗಿ ನಡೆದಿರಲಾರದ ವೃತ್ತಾಂತಗಳನ್ನು ಹೆಣೆದು ಸೇರಿಸಿದ್ದಾರೆ. ಆದರೆ ಮೂಲಭೂತವಾಗಿ ನಡೆದ ಪ್ರಸಂಗಗಳಿವೆ; ನಿಜವಾಗಿ ಭೂಮಿಯ ಮೇಲೆ ನಡೆದಾಡಿದ ಮನುಷ್ಯರಿದ್ದಾರೆ. ಅವರ ಲೋಕೋತ್ತರವಾದ ಚಾರಿತ್ರ ಜನರ ನೆನಪಿನಲ್ಲಿ ಉಳಿದುಬಂದಿದೆ.

ರಾಮಸ್ಯ ಸಹ ಸೌಮಿತ್ರೇಃ ರಾಕ್ಷಸಾನಾಂ ಚ ಸರ್ವಶಃ।
ವೈದೇಹ್ಯಾಶ್ಚೈವ ಯದ್ವೃತ್ತಂ

- ಇದು ರಾಮಾಯಣದ ಹಿನ್ನೆಲೆಯಲ್ಲಿರುವ ಇತಿಹಾಸ.

ರಾಮಾಯಣವು ಕೋಸಲರಾಜ್ಯದ ಇಕ್ಷ್ವಾಕುವಂಶದ ಅರಸರಲ್ಲಿ ಪ್ರಸಿದ್ಧನೆನಿಸಿದ ರಾಮನ ಚರಿತ್ರೆ. ಈ ಮಾತು ಬಾಲಕಾಂಡದ ಐದನೆಯ ಸರ್ಗದಲ್ಲಿ ಬರುತ್ತದೆ -

ಇಕ್ಷ್ವಾಕೂಣಾಮಿದಂ ತೇಷಾಂ ರಾಜ್ಞಾಂ ವಂಶೇ ಮಹಾತ್ಮನಾಂ।
ಮಹದುತ್ಪನ್ನಮಾಖ್ಯಾನಂ ರಾಮಾಯಣಮಿತಿ ಶ್ರುತಂ॥

ಇದೇ ಮಾತು ಬೌದ್ಧರ ಮಹಾವಸ್ತುವಿನ 'ರಾಜವಂಶ'ವೆಂಬ ಪ್ರಕರಣಗ್ರಂಥದಲ್ಲೂ ಧ್ವನಿತವಾಗಿದೆ. ಇಕ್ಷ್ವಾಕುಗಳು ಮೊದಲಿಗೆ ವಾರಣಾಸಿಯಲ್ಲಿ ಆಳುತ್ತಿದ್ದು ಅನಂತರ ಅಯೋಧ್ಯೆಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡವರು. 'ದಶರಥ ಜಾತಕ'ದಲ್ಲಿ ದಶರಥನು ವಾರಣಾಸಿಯ ಅರಸನೇ. ಇಕ್ಷ್ವಾಕುಗಳ ಕಥೆ ಉತ್ತರಭಾರತದ ಕಥೆ. ರಾಮನು ಉತ್ತರಭಾರತದ ವೀರರಾಜಪುತ್ರನಾಗಿದ್ದು, ಕಾರಣಾಂತರದಿಂದ ದಂಡಕವನ್ನು ಪ್ರವೇಶಿಸಿ ದಕ್ಷಿಣಭಾರತದಲ್ಲಿ ಅಲೆದಾಡಿ ಅಲ್ಲಿನ ಅರಸರೊಂದಿಗೆ ಕಾದಾಡಿದ ಪ್ರಸಂಗವನ್ನು ರಾಮಾಯಣ ಹೇಳುತ್ತದೆ. ಈ ಪ್ರಸಂಗದ ನಿರೂಪಣೆಯಲ್ಲಿ ಆ ಕಾಲದ ಇತಿಹಾಸ ಅನಿವಾರ್ಯವಾಗಿ ನುಗ್ಗಿ ಬಂದಿದೆ. ಕಾವ್ಯದ ಅಲಂಕಾರಗಳನ್ನು ತೆಗೆದಿಟ್ಟು ನಿರೂಪಣೆಯ ವಿವರಗಳನ್ನು ವಿಶ್ಲೇಷಣೆ ಮಾಡಿದರೆ ರಾಮಾಯಣವನ್ನು ಸಿದ್ಧಮಾಡಿದ ಕಾಲದಲ್ಲಿ ನಮ್ಮ ದೇಶದ ಸಂಸ್ಕೃತಿಯ ಸ್ಥಿತಿ ಸುಮಾರಾಗಿ ಸ್ಪಷ್ಟವಾಗುತ್ತದೆ.

ರಾಮಾಯಣ ರೂಪತಳೆದುದು ಆರ್ಯಾವರ್ತದಲ್ಲೆಂಬುದು ನಿರ್ವಿವಾದ; ಇಕ್ಷ್ವಾಕುಗಳು, ಅವರಲ್ಲೂ ರಾಮ, ವಿಶೇಷವಾಗಿ ಇಲ್ಲಿದ್ದ ಸಂಸ್ಕೃತಿಯ ಪ್ರತಿಮೆಗಳು. ಆಗಲೇ ವೇದಧರ್ಮದ ಪ್ರಭಾವ ಹೆಚ್ಚೂ

ಕಡಮೆ ಉತ್ತರ ಭಾರತದಲ್ಲೆಲ್ಲ ಹರಡಿದ್ದಿತು ವಿಂಧ್ಯಪರ್ವತವನ್ನು ದಾಟಿದರೆ ತಾಂತ್ರಿಕ ಪ್ರಕ್ರಿಯೆಗಳನ್ನಳವಡಿಸಿಕೊಂಡ ಹಲವಾರು ಜನಾಂಗಗಳು ಸ್ವತಂತ್ರವಾದ ಸಂಪ್ರದಾಯಗಳಲ್ಲಿ ಬಾಳುತ್ತಿದ್ದರು. ಹೀಗೆಂದಮಾತ್ರಕ್ಕೆ ಸಂಸ್ಕೃತಿಬಾಹಿರರೆಂದು ಹೇಳಲಾಗದು; ರಾಮಾಯಣದಲ್ಲಿ ಬರುವ ದಕ್ಷಿಣ ಭಾರತದ ಚಿತ್ರ ಇದನ್ನು ಸಮರ್ಥಿಸುವುದಿಲ್ಲ.

ಹಲವಾರು ಪ್ರಸಿದ್ಧವಾದ, ಸಂಪನ್ನವಾದ ರಾಜ್ಯಗಳಿದ್ದವು. ರಾಮಾಯಣದಲ್ಲಿ ಆಂಧ್ರ, ಪುಂಡ್ರ, ಚೋಳ, ಪಾಂಡ್ಯ, ಕೇರಳ ಈ ದಕ್ಷಿಣ ರಾಜ್ಯಗಳ ಉಲ್ಲೇಖವಿದೆ. ಆರ್ಯಾವರ್ತದ ಜನರಿಗೂ ಈ ದಕ್ಷಿಣದ ಜನರಿಗೂ ಆಗಾಗ ಜಗಳವಾಗುತ್ತಿದ್ದುದು ಸ್ಪಷ್ಟವಾಗುತ್ತದೆ. ಉತ್ತರದವರು ತಮ್ಮ ಸೀಮೆಯನ್ನು ದಾಟಿ ಈ ನಾಡಿನ ಒಳವಲಯಗಳಲ್ಲಿ ವಲಸೆಹೋಗಿ ನಿಲ್ಲುತ್ತಿದ್ದುದೂ ಉಂಟು; ದಂಡಕವನದಲ್ಲಿ ಅಗಸ್ತ್ಯಾಶ್ರಮವೇ ಇದ್ದಿತಷ್ಟೆ. ಇಂಥ ಸಾಹಸಿಗಳಿಗೆ ಅಲ್ಲಿನ ಜನ ಉಪದ್ರವ ಕೊಡುತ್ತಿದ್ದರೆಂದರೆ ಆಶ್ಚರ್ಯವೇನಲ್ಲ. ಯಮುನಾ ನದಿಯ ಆಚೆ ಚಿತ್ರಕೂಟದಲ್ಲಿ, ಗೋದಾವರೀತೀರದ ಜನಸ್ಥಾನದಲ್ಲಿ ಇರುತ್ತಿದ್ದ ಉತ್ತರದ ತಪಸ್ವಿಗಳಿಗೆ ಅಲ್ಲಿನ ನಿವಾಸಿಗಳು ಕೊಡುತ್ತಿದ್ದ ಬಾಧೆಯನ್ನು ತಪ್ಪಿಸಲು ದಶರಥನೇ ಅಲ್ಲಿಗೆ ಹಲವಾರು ಬಾರಿ ಹೋಗಿದ್ದನು. ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಅಲ್ಲಿಗೆ ಕೊಂಡೊಯ್ದುದೂ ಇದೇ ಕಾರಣಕ್ಕಾಗಿ. ಗಂಗೆಯಿಂದ ಪಂಪಾನದಿಯವರೆಗೂ ಈ ಜನರ ಹಾವಳಿ ಹೆಚ್ಚಾಗಿದ್ದಿತು.

ಈ ಜನರನ್ನು ರಾಕ್ಷಸರೆಂದು ವೈದಿಕಧರ್ಮದವರು ವ್ಯವಹರಿಸುತ್ತಿದ್ದಂತೆ ತೋರುತ್ತದೆ. ಇದು ಹೀನಾಯದ ಮಾತೇನಲ್ಲ; ಬೇರೆ ವರ್ಗವೆಂದು ಸೂಚಿಸುವ ಮಾತು ಅಷ್ಟೆ. ರಾಮಾಯಣದಲ್ಲಿ ರಾಕ್ಷಸರ ಪ್ರಸ್ತಾಪ ಬಂದಾಗ ಅವರನ್ನು ಅಮಾನುಷ ವೃತ್ತಿಯವರೆಂದು ಬಣ್ಣಿಸಿದರೂ ಅವರ ಸ್ವಭಾವವೇನೋ ಮನುಷ್ಯ ಸ್ವಭಾವವೇ. ನಿದರ್ಶನಕ್ಕೆ ರಾಕ್ಷಸೇಂದ್ರನಾದ ರಾವಣನಿಗೆ ಹತ್ತು ತಲೆಗಳಿದ್ದುವೆಂದು ತಾನೇ ನಮ್ಮ

ಕಲ್ಪನೆ? ಆದರೆ 'ದಶಾನನ' ಅಥವಾ ಹತ್ತು ಮುಖದವನು ಎಂದರೆ ಹತ್ತು ದಿಕ್ಕುಗಳಲ್ಲಿ ವ್ಯವಹಾರವಿದ್ದವನು ಎಂದರ್ಥ; 'ದಶಗ್ರೀವ' ಅಥವಾ ಹತ್ತು ಕುತ್ತಿಗೆಗಳುಳ್ಳವನು ಎಂದರೆ ಅಷ್ಟು ಬಲಶಾಲಿಯೆಂದರ್ಥ ಅಷ್ಟೆ. ವಾಲ್ಮೀಕಿ ರಾಮಾಯಣದಲ್ಲೇ ಸುಂದರಕಾಂಡದಲ್ಲಿ ಹನುಮಂತನು ಲಂಕೆಗೆ ಹೋಗಿ ಅರಮನೆಯ ಅಂತಃಪುರದಲ್ಲಿ ನಿದ್ದೆ ಮಾಡುತ್ತಿದ್ದ ರಾವಣನನ್ನು ಕಂಡಾಗ ಅವನು ಕಂಡದ್ದು ಎರಡೇ ಭುಜಗಳು - "ಕಾಂಚನಾಂಗದಸನ್ನದ್ಧೌ, ವಿಕ್ಷಿಪ್ತೌ ರಾಕ್ಷಸೇಂದ್ರಸ್ಯ ಭುಜೌ ಇಂದ್ರಧ್ವಜೋಪಮೌ". ರಾಮನು ರಾವಣನನ್ನು ಕೊಂದಾಗಲೂ ಕತ್ತರಿಸಿ ಬಿದ್ದದ್ದು ಒಂದೇ ತಲೆ. "ರಾವಣಸ್ಯ ಶಿರೋಚ್ಛಿಂದತ್ ಶ್ರೀಮಜ್ಜ್ವಲಿತ ಕುಂಡಲಂ." ರಾವಣನ ಹತ್ತುತಲೆ, ಇಪ್ಪತ್ತು ಕೈಗಳ ಕಲ್ಪನೆ ಕವಿಸಮಯ; ಅದನ್ನು ಯಥಾರ್ಥವರ್ಣನೆಯೆನ್ನಲು ಆಧಾರ ಸಾಲದು.

ಹಾಗೆಯೇ ರಾಕ್ಷಸರು ಮನುಷ್ಯಜಾತಿಯವರೇ, ಆದರೆ ವೈದಿಕ ಸಂಸ್ಕಾರವಿಲ್ಲದವರು ; ಬೇರೆ ಬೇರೆ ಆಚಾರದವರು; ಮೇಲಣ ಸಂಸ್ಕೃತಿಯ ವ್ಯಾಪ್ತಿಗೆ ಸೇರದವರು; ದಕ್ಷಿಣ ಭಾರತದಲ್ಲಿ ಆಗ ಇರುತ್ತಿದ್ದ ಜನ. ಇವರಲ್ಲಿ ಹಲವಾರು ಜನಾಂಗಗಳಿದ್ದವು. ವಾಲ್ಮೀಕಿ ಮೂರು ಜನಾಂಗಗಳನ್ನು ವಿಶೇಷವಾಗಿ ಪ್ರಸ್ತಾಪಿಸಿದ್ದಾನೆ. ರಾವಣನ ಜನರಾದ ರಾಕ್ಷಸರಲ್ಲದೆ ದಂಡಕಾರಣ್ಯದ ಉತ್ತರಭಾಗದಲ್ಲಿ ವಿರಾಧರೆಂಬುವರೂ, ತೀರದಕ್ಷಿಣದಲ್ಲಿ ದಾನವರೆಂಬುವರೂ ಇರುತ್ತಿದ್ದ ಉಲ್ಲೇಖವಿದೆ. ಜವ ಮತ್ತು ಶತಹ್ರದಾ ಎಂಬ ಗಂಡು-ಹೆಣ್ಣುಗಳಿಂದ ಹೊರಬಂದ ವಿರಾಧರು ಭಯಾನಕವಾದ ರೂಪವುಳ್ಳ ಕಾಡುಜನ; ಅವರಲ್ಲಿ ಪ್ರಮುಖನಾದ ವಿರಾಧನೆಂಬುವನನ್ನು ರಾಮಲಕ್ಷ್ಮಣರು ಕೊಲ್ಲುತ್ತಾರೆ. ದಾನವರಲ್ಲಿ ಕಬಂಧ ಒಬ್ಬನು. ದಾನವರಿಗೂ ರಾಕ್ಷಸರಿಗೂ ವೈಮನಸ್ಯವಿದ್ದಿತು. ರಾವಣನನ್ನು ರಾಮಾಯಣವು 'ದಾನವಶತ್ರು' ಎಂದು ನಿರ್ದೇಶಿಸುತ್ತದೆ.

ರಾಕ್ಷಸರು ದಕ್ಷಿಣದ ತುದಿಯಲ್ಲಿ, ಸಿಂಹಳದ ಮತ್ತು ಸುತ್ತಮುತ್ತ ದ್ವೀಪಗಳಲ್ಲಿ ಇರುತ್ತಿದ್ದ ಜನ. ಲಂಕೆ ಅವರ ಮುಖ್ಯ ನಗರ. ಲಂಕೆಯೆನ್ನುವುದು

ಈಗಿನ ಸಿಂಹಳವೋ ಅಥವಾ ಭಾರತದಲ್ಲೇ ಮತ್ತೊಂದು ದ್ವೀಪದಂತಿರುವ ನಗರವೋ ಎನ್ನುವುದು ವಿವಾದಾಸ್ಪದ. ಸಂಪ್ರದಾಯವೇನೋ ಸಿಂಹಳವನ್ನೇ ತೋರಿಸುತ್ತದೆ. ದಕ್ಷಿಣದ ಸಮುದ್ರತೀರಗಳಲ್ಲೂ ಸಾತ್ಪುರ ಮತ್ತು ವಿಂಧ್ಯಪರ್ವತಶ್ರೇಣಿಗಳ ನಡುವೆ ಬಯಲು ಭೂಮಿಯಲ್ಲೂ ರಾಕ್ಷಸರು ಇರುತ್ತಿದ್ದರು. ಈಗಿನ ಗೋಂಡರೆಂಬ ಜನಾಂಗದ ಪೂರ್ವಜರೇ ರಾಕ್ಷಸರೆಂದು ಕೆಲವು ಪಂಡಿತರು ಹೇಳಿದ್ದಾರೆ; ವಾಲ್ಮೀಕಿ ರಾಮಾಯಣದಲ್ಲಿ ಇಂದಿನ ಅಂಡಮಾನ್, ಬೋರ್ನಿಯೋ ಮುಂತಾದ ಪ್ರದೇಶಗಳ ಪ್ರಸ್ತಾಪವಿದೆಯೆಂದೂ, ಇವೆಲ್ಲ ರಾಕ್ಷಸರ ಬೀಡೆಂದೂ ಇವರ ಎಣಿಕೆ. ರಾಕ್ಷಸರು ಶುದ್ಧ ದ್ರಾವಿಡರೆಂದೂ ಆದಿವಾಸಿಗಳೆಂದೂ ಒಂದು ಅಭಿಪ್ರಾಯ.

ಇದು ಹೇಗಾದರೂ ಇರಲಿ. ರಾಮಾಯಣದಲ್ಲಿ ಬರುವ ರಾಕ್ಷಸರ ವರ್ಣನೆ ಸ್ವಾರಸ್ಯವಾಗಿದೆ. ಇವರು ಬೆಟ್ಟಗುಡ್ಡಗಳಲ್ಲೂ ಕಾಡುಮೇಡುಗಳಲ್ಲೂ ಇರುತ್ತಿದ್ದರು. ಅವರು 'ಮಹಾಬಲ'ರು, 'ಮಹಾಕಾಯ'ರು, ಕಪ್ಪುಬಣ್ಣದವರು, 'ನೀಲಜೀಮೂತವರ್ಣ'. ಮನುಷ್ಯರನ್ನೇ ತಿನ್ನುವ ಪದ್ಧತಿ ಅವರಲ್ಲಿ ಇದ್ದಿತು. ಜಗತ್ತಿನ ಹಲವಾರು ಪ್ರಾಚೀನ ಜನಾಂಗಗಳಲ್ಲಿ ಈ ಪದ್ಧತಿ ಇದ್ದಿತಷ್ಟೆ. ರಾಕ್ಷಸರು 'ಪಿಶಿತಾಶನ'ರು, 'ಮಾಂಸಾಶನ'ರು; ಮನುಷ್ಯರ ಮಾಂಸವೆಂದರೆ ಹೆಚ್ಚಿನ ರುಚಿ. ಮಾರೀಚನು ದಂಡಕಾರಣ್ಯದಲ್ಲಿ ಋಷಿಗಳ ಮಾಂಸವನ್ನು ತಿನ್ನುತ್ತ ತಿರುಗಾಡುತ್ತಿದ್ದನು. ತಾಟಕಿ ಅಗಸ್ತ್ಯನನ್ನೇ ತಿನ್ನಲು ಹೊರಟಿದ್ದಳು. ರಾವಣನು ಕುಬೇರನ ದೂತನನ್ನು ಕೊಂದು ಅವನನ್ನು ತಿನ್ನಿರೆಂದು ರಾಕ್ಷರಿಗೆ ಕೊಟ್ಟನು. ಹನುಮಂತನು ಲಂಕೆಯಲ್ಲಿ ಸೀತೆಯನ್ನು ಹುಡುಕುತ್ತಾ ರಾವಣನು ಸೀತೆಯನ್ನು ತಿಂದಿರಲಾರನೇ ಎಂದು ಸಂಶಯಪಡುತ್ತಾನೆ. (ಅಬಂಧುರ್ಭಕ್ಷಿತಾ ಸೀತಾ ರಾವಣೇನ ತಪಸ್ವಿನೀ). ತಿನ್ನುವುದರಲ್ಲಿ ರಾಕ್ಷಸರಿಗಿದ್ದ ಅತಿಪ್ರವೃತ್ತಿಯಂತೆಯೇ ಕುಡಿಯುವುದೂ ಅವರ ಗೀಳಾಗಿದ್ದಿತು. ಅವರ ಪಾನಭೂಮಿಯ ವರ್ಣನೆ ರಾಮಾಯಣದಲ್ಲಿ ಬರುತ್ತದೆ. ಹಾಗೆಯೇ ರಾಕ್ಷಸರು ಸ್ವಚ್ಛಂದರಾದ ಕಾಮಚಾರಿಗಳು, ಲೈಂಗಿಕ ಲಂಪಟರು.

ಇವರ ಧರ್ಮವು ವೈದಿಕವಿಧಿಗಳಿಗೆ ವಿರುದ್ಧವಾಗಿದ್ದುದು ಸಹಜವೇ. ಹೀಗಾಗಿ ಉತ್ತರದವರ ತಪಶ್ಚರ್ಯೆಯನ್ನು ಇವರು ಹಾಳುಮಾಡಲು ಹೊರಡುತ್ತಿದ್ದರೆಂದರೆ ಆಶ್ಚರ್ಯವೇನಲ್ಲ. ಶೈವಧರ್ಮ ಇವರಲ್ಲಿ ಪ್ರಚುರವಾಗಿದ್ದಿತು; ನಿಕುಂಭಿಲೆ ರಾಕ್ಷಸರ ಕುಲದೇವತೆ. ರಾಕ್ಷಸರು ಕರಿಯರಾದರೂ ಎಲ್ಲರೂ ಕುರೂಪಿಗಳಾಗಿದ್ದಿರಲಿಲ್ಲ. ರಾವಣನು ಸುಂದರನೇ, ಮಂಡೋದರಿಯಂತೂ ಸುರಸುಂದರಿಯಂತೆ.

ರಾಕ್ಷಸರ ಮೂಲಪುರುಷ ವಿದ್ಯುತ್ಕೇಶನೆಂಬ ರಾಜನೆಂದೂ, ಅವನ ಹೆಂಡತಿ ಸಾಲಕಟಂಕಟಾ ಎಂಬಾಕೆ ಸುಕೇಶನೆಂಬ ಮಗನನ್ನು ಹೆತ್ತಳೆಂದೂ, ಆದರೆ ಅವನನ್ನು ಒಡನೆಯೇ ಪರಿತ್ಯಾಗ ಮಾಡಿದಳೆಂದೂ, ಶಿವನ ದಯೆಯಿಂದ ಸುಕೇಶನು ಬದುಕಿಕೊಂಡನೆಂದೂ ಕಥೆಯಿದೆ. ಸುಕೇಶನಿಗೆ ಮಾಲ್ಯವಂತ, ಸುಮಾಲಿ, ಮಾಲಿಯೆಂಬ ಮೂವರು ಮಕ್ಕಳು, ಅಪ್ರತಿಮವೀರರು. ಅವರಿಗಾಗಿ ದೇವಶಿಲ್ಪಿಯಾದ ವಿಶ್ವಕರ್ಮನು ಕೈಲಾಸದಂತೆ ಸಂಪದ್ಭರಿತವಾದ ಲಂಕೆಯನ್ನು ಕಟ್ಟಿಕೊಟ್ಟನಂತೆ. ನರ್ಮದೆಯೆಂಬ ಗಂಧರ್ವಸ್ತ್ರೀಯ ಮೂವರು ಮಕ್ಕಳನ್ನು ಅವರು ಮದುವೆಯಾಗಿ ಲೋಕಕಂಟಕರಾದರು. ವೈದಿಕದೇವತೆಯಾದ ವಿಷ್ಣು ಅವರೊಂದಿಗೆ ಯುದ್ಧಕ್ಕೆ ಬಂದಾಗ ಅವರು ಪಾತಾಳ, ರಸಾತಳಗಳಿಗೆ ಓಡಿದರಂತೆ.

ಸುಮಾಲಿಯ ಮಗಳು ಕೈಕಸಿಯೆಂಬಾಕೆ ಕುಬೇರನ ತಂದೆ ವಿಶ್ರವಸನನ್ನು ಒಲಿಸಿಕೊಂಡು ರಾವಣ, ಕುಂಭಕರ್ಣ, ವಿಭೀಷಣರೆಂಬ ಮೂವರು ಗಂಡುಮಕ್ಕಳನ್ನೂ, ಶೂರ್ಪನಖೆಯೆಂಬ ಮಗಳನ್ನೂ ಪಡೆದಳು. ರಾವಣನು ಲಂಕೆಯಲ್ಲಿ ಇರುತ್ತಿದ್ದ ಕುಬೇರನನ್ನು ಅಲ್ಲಿಂದ ಓಡಿಸಿ ಅದನ್ನು ತನ್ನ ನಗರವನ್ನಾಗಿ ಮಾಡಿಕೊಂಡನು. ದಕ್ಷಿಣ ಸಾಗರದ ತೀರದಲ್ಲಿದ್ದ ತ್ರಿಕೂಟವೆಂಬ ಬೆಟ್ಟದ ಮೇಲೆ ರಾಕ್ಷಸರ ರಾಜಧಾನಿಯಾದ ಲಂಕೆ ಇದ್ದಿತೆಂಬ ವಿವರವಿದೆ.

ರಾವಣನು ರಾಜನಾಗಿದ್ದಾಗ ರಾಕ್ಷಸರ ಬಲ ಹೆಚ್ಚಿತು. 'ತ್ರೈಲೋಕ್ಯವಿಜಯಾಕಾಂಕ್ಷಿ'ಗಳಾಗಿ ಅವರು ಯಕ್ಷರ ಮೇಲೆ ಯುದ್ಧಕ್ಕೆ ಹೊರಟರು; ಕುಬೇರನನ್ನು ಸೋಲಿಸಿದರು; ಮನುಷ್ಯಲೋಕ, ಯಮಪುರಿ, ರಸಾತಲ, ಸಮುದ್ರದಾಚೆ ಭೋಗವತಿ, ಮಣಿಮಯಿ, ಕಾಲಿಯದೈತ್ಯನ ಅಶ್ಮನಗರ ಇವುಗಳ ಮೇಲೆಲ್ಲ ದಾಳಿ ಮಾಡಿದರು. ರಾವಣನ ಮಗ ಮೇಘನಾದ ದೇವತೆಗಳ ಗಣನಾಯಕನಾದ ಇಂದ್ರನೊಂದಿಗೆ ಸೆಣಸಾಡಿ ಅವನನ್ನು ಸೋಲಿಸಿ ಕಟ್ಟಿತಂದಿದ್ದನು. ಎಂದರೆ ರಾವಣನ ಕಾಲದಲ್ಲಿ ಇತರರಿಗೆ ರಾಕ್ಷಸರ ಭೀತಿ ಬಲಿಯಿತೆಂದರ್ಥ.

ರಾವಣನು ಸ್ವತಃ ಧರ್ಮಪರ; ಅವನನ್ನು ರಾಮಾಯಣ ಆಹಿತಾಗ್ನಿಯೆಂದೂ ಮಹಾತ್ಮನೆಂದೂ ಬಣ್ಣಿಸುತ್ತದೆ; ಅವನು ಯಜ್ಞ-ಯಾಗಾದಿಗಳನ್ನು ತಾನೇ ಮಾಡುತ್ತಿದ್ದವನು (ಕ್ರತುಪ್ರವರಯಾಜಿ), ವಿದ್ಯಾವಂತ, ಸಂಪನ್ನ, ಶೈವದ್ವಿಜ; ಎಂದರೆ ರಾಕ್ಷಸನಾದರೂ ವೈದಿಕ ಧರ್ಮಕ್ಕೆ ಒಲಿದಿದ್ದವನು. ವಾಲ್ಮೀಕಿಯು ರಾವಣನನ್ನು ಗೌರವದಿಂದ ಚಿತ್ರಿಸಿದ್ದಾನೆ; ರಾಮನು ಕೂಡ ರಾವಣನನ್ನು 'ಸಮರದಲ್ಲಿ ಚಂಡವಿಕ್ರಮ' 'ಅತ್ಯುನ್ನತ ಮಹೋತ್ಸಾಹ', 'ಮಹಾತ್ಮ', 'ಬಲಸಂಪನ್ನ'ನೆಂದು ಕೊಂಡಾಡಿದ್ದಾನೆ. "ಅಧರ್ಮಾನೃತಸಂಯುಕ್ತ"ನಾಗಿ ಅವನು ಹಾಳಾದನಷ್ಟೆ. ಉಳಿದಂತೆ ಅವನು ಯೋಗ್ಯನೇ, ಸಂಭಾವಿತನೇ. ರಾಮನು ವಿಭೀಷಣನಿಗೆ ರಾವಣನ ವಿಚಾರವಾಗಿ "ಮಮಾಪ್ಯೇಷ ಯಥಾ ತವ" ಎಂದು ಹೇಳಿದ್ದಾನೆ. ಇದಕ್ಕಿಂತ ಹೆಚ್ಚಿನ ಪ್ರಶಸ್ತಿ ಬೇಕೆ?

ರಾವಣನು ಆರ್ಯಾವರ್ತವನ್ನು ಹಲವಾರು ಬಾರಿ ದಾಳಿಮಾಡಿದ ಉಲ್ಲೇಖವಿದೆ. ರಾಮನ ಪೂರ್ವಜನಾದ ಅನರಣ್ಯನನ್ನೂ ರಾವಣನು ಸೋಲಿಸಿದ್ದನಂತೆ. ಮಾಹಿಷ್ಮತಿಯ ಹೈಹಯರಾಜ ಕಾರ್ತವೀರ್ಯಾರ್ಜುನ-ನೊಬ್ಬನ ವಿನಾ ಉಳಿದ ನಾಯಕರೆಲ್ಲ ರಾವಣನಿಗೆ ಹೆದರಿದ್ದರು. ರಾವಣನ

ಸೋದರಳಿಯ ಲವಣನು ಯಮುನಾ ನದಿಯ ದಂಡೆಯ ಮೇಲೆ ಮಧುಪುರಿಯಲ್ಲಿ ಆಳುತ್ತಿದ್ದನು. ಗಂಗಾನದಿಯ ಹತ್ತಿರದ ಪ್ರದೇಶಗಳನ್ನು ರಾವಣನ ನಂಟಳಾದ ತಾಟಕೆಯೂ, ಅವಳ ಮಗ ಮಾರೀಚನೂ ಆಳುತ್ತಿದ್ದರು. ರಾವಣನ ತಂಗಿ ಶೂರ್ಪನಖಿ ಗೋದಾವರೀತೀರದ ಜನಸ್ಥಾನವಲ್ಲಿ ಇರುತ್ತಿದ್ದಳು. ಅವಳಿಗೆ ರಾಮಲಕ್ಷ್ಮಣರಿಂದ ಒದಗಿದ ಪರಾಭವವೇ ರಾವಣನಲ್ಲಿ ಸೀತಾಪಹರಣದ ಸಂಕಲ್ಪವನ್ನು ಮೂಡಿಸಿತು. ಆದರೆ ಸೀತೆಯನ್ನು ಅವನು ಅಪಹರಿಸಿದುದು ಕಾಮದಿಂದಲ್ಲ; ರಾಮನಿಗೆ ಪ್ರತೀಕಾರ ಮಾಡಲು. ಖರನ ಸೇನಾಧಿಪತಿಯಾದ ಅಕಂಪನನ ಸಲಹೆ ಅದು.

ಶೂರ್ಪನಖಿ ಖರನನ್ನು ರಾಮನೊಂದಿಗೆ ಯುದ್ಧಕ್ಕೆ ಪ್ರಚೋದಿಸಿದಳಷ್ಟೆ. ಖರನೂ ಅವನೊಂದಿಗೆ ಹದಿನಾಲ್ಕು ಸಾವಿರ ರಾಕ್ಷಸರೂ ರಾಮನಿಂದ ಹತರಾದನಂತರ, ಉಳಿದ ಅಕಂಪನನು ರಾವಣನ ಬಳಿಗೆ ಓಡಿ ರಾಮಲಕ್ಷ್ಮಣರ ವೃತ್ತಾಂತವನ್ನು ಅವನಿಗೆ ಹೇಳಿ "ರಾಮನನ್ನು ನೀನು ಯುದ್ಧದಲ್ಲಿ ಗೆಲ್ಲಲಾರೆ. ಆದರೆ ಅವನಿಗೆ ಸೀತೆಯೆಂಬ ಸುಂದರಿ ಹೆಂಡತಿಯಿದ್ದಾಳೆ. ಅವಳನ್ನು ಹೇಗಾದರೂ ಅಪಹರಿಸಿಬಿಡು. ಅವಳಿಲ್ಲದೆ ರಾಮ ಬದುಕಲಾರ (ಸೀತಯಾ ರಹಿತೋ ರಾಮೋ ನ ಚೈವ ಹಿ ಭವಿಷ್ಯತಿ). ವಿರಹದಿಂದ ತಾನೇ ಸಾಯುತ್ತಾನೆ", ಎಂದು ಸಲಹೆ ಮಾಡುತ್ತಾನೆ. ಅನಂತರ ಶೂರ್ಪನಖಿ ಬಂದು ರಾವಣನನ್ನು ನಿರ್ಬಲನೆಂದು, ಲುಬ್ಧನೆಂದು, ಪ್ರಮತ್ತನೆಂದು ಮೂದಲಿಸಿ ಜನಸ್ಥಾನದಲ್ಲಿ ಸ್ವಜನರು ಸಾವಿರಾರು ಮಂದಿ ಸತ್ತರೂ ಸುಮ್ಮನಿದ್ದಾನೆಂದು ನಿಂದಿಸುತ್ತಾಳೆ. ಆಗ ಅವಳನ್ನು ರಾವಣನು 'ಕಶ್ಚ ರಾಮಃ ಕಥಂ ವೀರ್ಯಃ, ಕಿಂರೂಪಃ, ಕಿಂಪರಾಕ್ರಮಃ' ಎಂದು ಪ್ರಶ್ನಿಸುತ್ತಾನೆ.

ರಾವಣನು ರಾಮನ ವಿಚಾರವನ್ನು ಅರಿತದ್ದೇ ಹೀಗೆ. ಆದರೆ ರಾಮನೇನೋ ಹುಡುಗನಾಗಿದ್ದಾಗಲೇ ವಿಶ್ವಾಮಿತ್ರನಿಂದ ರಾವಣನ ಹೆಸರನ್ನು ಕೇಳಿದ್ದನು ; ಚಿತ್ರಕೂಟದಲ್ಲಿದ್ದಾಗ ಶೂರ್ಪನಖಿ ರಾವಣನ ವಿಚಾರ ಹೇಳಿದ್ದಳು. ಆಗ ರಾಮನಿಗೆ ಯಾವ ಬಗೆಯ ಕುತೂಹಲವೂ ಕೆರಳಿರಲಿಲ್ಲ. ಆದರೆ ಜಟಾಯು ಸೀತೆಯನ್ನು ರಾವಣನು ಕೊಂಡೊಯ್ದನೆಂದು ಹೇಳಿದಾಗ ರಾಮನು "ರಾವಣನು ಸೀತೆಯನ್ನು ಕೊಂಡೊಯ್ದ ಕಾರಣ ಏನು? ನಾನು ಅವನಿಗೆ ಮಾಡಿದ ಅನ್ಯಾಯವಾದರೂ ಏನು? ಈ ರಾವಣ ಯಾರು? ಎಂಥವನು? ಎಲ್ಲಿದ್ದಾನೆ?" ಎಂದು ಕೇಳುತ್ತಾನೆ. ಪಕ್ಷಿ ಹೇಳಲು ಆರಂಭಿಸಿ ಒಡನೆಯೇ ಪ್ರಾಣಬಿಡುತ್ತದೆ. ಮುಂದೆ ದನುವಿನೊಡನೆ ರಾಮ ಮಾತನಾಡುತ್ತ "ರಾವಣನ ಹೆಸರನ್ನು ಮಾತ್ರ ಕೇಳಿದ್ದೇನೆ, ಉಳಿದದ್ದೇನೂ ತಿಳಿಯದು" ಎಂದು ಹೇಳುತ್ತಾನೆ. ಹೀಗೆ ರಾಮ - ರಾವಣರಲ್ಲಿ ಮೊದಲಿಗೆ ವೈಮನಸ್ಯವೇನೂ ಇದ್ದ ಉಲ್ಲೇಖವಿಲ್ಲ. ಸೀತಾಪಹರಣವೂ ಪ್ರಾಸಂಗಿಕವಾದದ್ದು.

ರಾಕ್ಷಸರಂತೆಯೇ ವಾನರರೂ ಮನುಷ್ಯರೇ. ಅವರು ಬರಿಯ ಕಪಿಗಳೆಂಬುದು ವಾಲ್ಮೀಕಿಯ ರಾಮಾಯಣದಿಂದ ಧ್ವನಿತವಾಗುವುದಿಲ್ಲ. ವಿಂಧ್ಯಸಾಲಿನ ಕೆಳಗೆ ದಕ್ಷಿಣಾಪಥದ ಗುಡ್ಡಗಾಡಿನಲ್ಲಿದ್ದ ಕಾಡುಜನ ಇವರು. ಇವರಲ್ಲಿ ವಾನರರು, ಋಕ್ಷರು, ಗೋಲಾಂಗೂಲರು ಮುಂತಾದ ಪಂಗಡಗಳಿದ್ದವು. ಈಗಿನ ಕೋರ್ಕು ಎಂಬ ಛೋಟಾನಾಗಪುರ ಪ್ರದೇಶದ ಆದಿವಾಸಿಗಳ ಮೂಲಪುರುಷರು ಇವರೆಂದು ಒಂದು ಅಭಿಪ್ರಾಯ. ಇವರು ಮೊದಲಿಗೆ ಮುಂಡುಭಾಷೆಯನ್ನಾಡುತ್ತಿದ್ದು, ಮೈ ಮುಚ್ಚಿಕೊಳ್ಳದೆ, ಕಾಡುಗಳಲ್ಲೇ ಬಾಳುತ್ತಿದ್ದರು. ಇವರ ಗುಂಪಿಗೆ ವಾಲಿ ನಾಯಕನಾಗಿದ್ದನು. ವಾನರರಿಗೂ ರಾಕ್ಷಸರಿಗೂ ಒಮ್ಮೆ ಕಾಳಗ ನಡೆದಾಗ ವಾಲಿ ರಾವಣನನ್ನು ಕೈಕಟ್ಟಿ ಕರುವಿನಂತೆ ಆಡ್ಡಾಡಿಸಿದ್ದನಂತೆ. ಆಮೇಲೆ ವಾಲಿಗೂ ರಾವಣನಿಗೂ ಸಖ್ಯ ಬೆಳೆದುಬಂದಿತಂತೆ. ವಾನರರಲ್ಲಿಯೂ ಸಂಸ್ಕೃತಿಯಿಲ್ಲದಿರಲಿಲ್ಲ.

ಗಾಯಕ, ಪಂಡಿತ, ವ್ಯವಹಾರ ಕುಶಲನಾದ ಹನುಮಂತನು ವಾನರನೆಂಬುದನ್ನು ಮರೆಯಬಾರದು. ಆದರೆ ಸಾಮಾನ್ಯವಾಗಿ ಅವರು ಕಾಡುಜನ; ಕುಡಿತ, ಕುಣಿತ ಅವರ ಪ್ರೀತಿಯ ಹವ್ಯಾಸಗಳು. ರಾಮ ಅವರ ಬೆಂಬಲವನ್ನು ಪಡೆದದ್ದು ರಾಕ್ಷಸರನ್ನು ಸದೆಬಡಿಯುಲು ಅನುಕೂಲವಾಯಿತು. ದಕ್ಷಿಣದೇಶದ ಪರಿಚಯವಿಲ್ಲದ ರಾಮಲಕ್ಷ್ಮಣರಿಗೆ ಸೀತೆಯನ್ನು ಹುಡುಕಿಕೊಟ್ಟವರು ಈ ಜನ.



**ಕಿಮಿದಂ ವ್ಯಾಹೃತಂ ಮಯಾ**

ಬೇಡನನ್ನು 'ಅಯ್ಯೋ, ನಾನೇಕ ಶಪಿಸಿದೆ' ಎಂದು ವಾಲ್ಮೀಕಿ ಪರಿತಪಿಸಿದನು

## (೬) ರಾಮೋಪಾಖ್ಯಾನ

ನಮ್ಮ ದೇಶದ ಎರಡು ದೊಡ್ಡ ಗ್ರಂಥಗಳಾದ ರಾಮಾಯಣ, ಮಹಾಭಾರತಗಳಲ್ಲಿ ಯಾವುದು ಪ್ರಾಚೀನವೆಂಬ ವಿಚಾರವಾಗಿ ವಿಪುಲವಾದ ವಾದ ನಡೆದಿದೆ. ಅವುಗಳ ಕಾಲ ನಿರ್ಣಯದ ವಿಚಾರವಾಗಿ ಭಾರತ ಯುದ್ಧದಷ್ಟೇ ಪ್ರಬಲವಾದ ಗೊಂದಲ ಎದ್ದಿದೆ.

ಸಿದ್ಧಾಂತವಂತೂ ಸಮೀಪಿಸಿಲ್ಲ. ಆದರೆ ಇಷ್ಟು ಮಾತ್ರ ಸ್ಪಷ್ಟ. ಮಹಾಭಾರತದಲ್ಲಿ ರಾಮಾಯಣದ ಕಥೆ ಅಡಕವಾಗಿದೆ; ರಾಮಾಯಣದಲ್ಲಿ ಮಹಾಭಾರತದ ಪ್ರಸ್ತಾಪವಿಲ್ಲ. ಎಂದರೆ ಮಹಾಭಾರತ ಇಂದಿನ ರೂಪವನ್ನು ತಳೆಯುವ ಕಾಲಕ್ಕೆ ರಾಮಾಯಣದ ಕಥೆ ಆಗಲೇ ಪ್ರಚಲಿತವಾಗಿದ್ದಿತು. ಆದರೆ ಮಹಾಭಾರತದ ಸಂಪಾದಕನಿಗೆ ವಾಲ್ಮೀಕಿ ರಾಮಾಯಣದ ಪರಿಚಯವಿದ್ದಿತೆಂದು ಸಾಧಿಸುವುದು ಕಷ್ಟ. ಮಹಾಭಾರತದಲ್ಲಿ ಎಲ್ಲಿಯೂ ವಾಲ್ಮೀಕಿ ಕವಿಯೆಂಬ ಕೀರ್ತಿಯಾಗಲೀ, ಅವನ ಕಾವ್ಯದ ಪ್ರಸ್ತಾಪವಾಗಲೀ ಬರುವುದಿಲ್ಲ.

ಮಹಾಭಾರತದಲ್ಲಿ ಹಲವೆಡೆ ರಾಮನ, ರಾಮನ ಕಥೆಯ ಉಲ್ಲೇಖವಿದೆ. ಪ್ರಮುಖವಾಗಿ ವನಪರ್ವದ 34ನೆಯ ಅಧ್ಯಾಯದಿಂದ ಹದಿನೆಂಟು ಸಣ್ಣ ಸಣ್ಣ ಅಧ್ಯಾಯಗಳಲ್ಲಿ ರಾಮನ ಕಥೆ ಬರುತ್ತದೆ; ಇದಕ್ಕೆ 'ರಾಮೋಪಾಖ್ಯಾನ'ವೆಂದು ಹೆಸರಿಟ್ಟಿದ್ದಾರೆ. ಜಯದ್ರಥನಿಂದ ಅಪಹರಿಸಲ್ಪಟ್ಟ ದ್ರೌಪದಿಯನ್ನು ಪಾಂಡವರು ಬಿಡಿಸಿಕೊಂಡುಬಂದಮೇಲೆ ಮಾರ್ಕಂಡೇಯ ಋಷಿ ಯುಧಿಷ್ಠಿರನ ಪ್ರಶ್ನೆಗೆ ಉತ್ತರವಾಗಿ ರಾಮನ ಕಥೆಯನ್ನು ಹೇಳುತ್ತಾನೆ. ದುಷ್ಟರಿಂದ ಸಜ್ಜನರಿಗೆ ಹಿಂದೆಯೂ ಅಪಚಾರವಾಗಿದೆಯೆಂಬುದಕ್ಕೆ ಸೀತಾಪಹರಣವನ್ನು ಮಾರ್ಕಂಡೇಯ ನಿದರ್ಶನವನ್ನಾಗಿ ಕೊಡುತ್ತಾನೆ.

ಯುದಿಷ್ಠಿರನಿಗೆ ರಾಮ 'ಶ್ರುತಪೂರ್ವ'ನಾಗಿದ್ದಾನೆ. ಎಂದರೆ ರಾಮನ ಕೀರ್ತಿ ಯುಧಿಷ್ಠಿರನಿಗೆ ತಿಳಿದಿದ್ದಿತು.

ಇಕ್ಷ್ವಾಕುವಂಶದಲ್ಲಿ ಅಜನ ಮೊಮ್ಮಗನಾಗಿ, ದಶರಥನ ಮಗನಾಗಿ ಹುಟ್ಟಿ ಬೆಳೆದ ರಾಮನ ಕಥೆ ಸುಮಾರಾಗಿ ವಾಲ್ಮೀಕಿಯ ಜಾಡನ್ನೇ ಅನುಸರಿಸುತ್ತದೆ. ಪೌಲಸ್ತ್ಯನಾದ ರಾವಣ ಬ್ರಹ್ಮನಿಂದ ಗಂಧರ್ವ-ದೇವಾಸುರ-ಯಕ್ಷ-ರಾಕ್ಷಸರಿಂದಲೂ ಸರ್ಪಕಿನ್ನರಭೂತಗಳಿಂದಲೂ ಪರಾಭವವಾಗದಂತೆ ವರವನ್ನು ಪಡೆದು ಲೋಕಕಂಟಕನಾದದ್ದು; ಬ್ರಹ್ಮನಲ್ಲಿ ದೇವತೆಗಳ ಮೊರೆ; ಋಕ್ಷವಾನರಯೋನಿಗಳಲ್ಲಿ ದೇವತೆಗಳ ಅವತರಣ; ರಾಮನ ರಾಜ್ಯಾಭಿಷೇಕ ಸಮಾರಂಭ; ಮಂಥರಾಕೈಕಯಿಯರ ವ್ಯಾಘಾತ; ರಾಮನ ವನಗಮನ; ಭರತನ ಚಿತ್ರಕೂಟಯಾತ್ರೆ; ಖರದೂಷಣಾದಿ ರಾಕ್ಷಸರ ವಧೆ; ಮೃಗರೂಪದ ಮಾರೀಚನ ವಧೆ; ಸೀತಾಪಹರಣ; ಜಟಾಯುವಿನ ವಧೆ; ಕಬಂಧಕದನ; ರಾಮ, ಸುಗ್ರೀವರ ಸಖ್ಯ; ವಾಲಿ ವಧೆ; ಅಶೋಕವನಿಕೆಯಲ್ಲಿ ರಾವಣಸೀತಾಸಂವಾದ; ಸೀತಾನ್ವೇಷಣೆಗೆಂದು ವಾನರರ ಪ್ರೇಷಣೆ; ಹನುಮದ್‌ವೃತ್ತಾಂತ; ವಾನರರ ಸೈನ್ಯ ಸಂಘಟನೆ; ಸೇತುಬಂಧ; ವಿಭೀಷಣನಿಗೆ ಲಂಕಾರಾಜ್ಯಾಭಿಷೇಕ; ರಾಮಸಂದೇಶ; ರಾಕ್ಷಸ ವಾನರರ ಘೋರಸಂಗ್ರಾಮ; ರಾಮರಾವಣ ಸೈನ್ಯದ ದ್ವಂದ್ವಯುದ್ಧ; ಕುಂಭಕರ್ಣವಧೆ; ಇಂದ್ರಜಿತುವಿನ ಮಾಯಾಯುದ್ಧ; ರಾಮಲಕ್ಷ್ಮಣರ ಮೂರ್ಛೆ; ಇಂದ್ರಜಿದ್ವಧೆ; ಸೀತೆಯ ವಿಚಾರದಲ್ಲಿ ರಾಮನ ಸಂಶಯ; ದೇವತೆಗಳಿಂದ ಆಕೆಯ ಶುದ್ಧಿಸಮರ್ಥನೆ; ಅಯೋಧ್ಯಾ ಪ್ರತ್ಯಾಗಮನ; ಭರತನೊಂದಿಗೆ ಸಮಾಗಮ; ರಾಮನ ರಾಜ್ಯಾಭಿಷೇಕ ಹೀಗೆ ರಾಮೋಪಾಖ್ಯಾನ ಸಾಗುತ್ತದೆ.

ಕಡೆಯಲ್ಲಿ ಮಾರ್ಕಂಡೇಯ ಯುಧಿಷ್ಠಿರನಿಗೆ "ದುಃಖಿಸಬೇಡ, ಹಿಂದೆ ಹೀಗೆ ಅಮಿತ ತೇಜಸ್ಸಿನ ರಾಮನಿಗೇ ವನವಾಸದಲ್ಲಿ ಅತ್ಯುಗ್ರವಾದ ವ್ಯಸನ ಒದಗಿತು. ರಾಮ ಅಸಹಾಯನಾಗಿದ್ದವನು; ಕೋತಿಗಳೇ

(ಶಾಖಾಮೃಗಾಃ) ಅವನ ನೇಹಿಗರು; ಕರಡಿಗಳೇ ನಂಟರು. ಹೀಗಿದ್ದೂ ವೈದೇಹಿಯನ್ನು ಅಪಹರಿಸಿಕೊಂಡು ಹೋದ ರಾಕ್ಷಸ ದಶಗ್ರೀವ ಧೀರವಿಕ್ರಮನಾಗಿದ್ದರೂ ರಾಮ ಅವನನ್ನು ಯುದ್ಧದಲ್ಲಿ ಕೊಂದನಷ್ಟೆ" ಎಂದು ಆಶ್ವಾಸನೆ ನೀಡುತ್ತಾನೆ (262-11).

ವಾಲ್ಮೀಕಿ ರಾಮಾಯಣದಲ್ಲಿ ಬರುವ ದಶರಥನ ಪುತ್ರಕಾಮೇಷ್ಟಿ, ರಾಮನ ಧನುರ್ಭಂಗ, ಸೀತಾಸ್ವಯಂವರ, ವಿಶ್ವಾಮಿತ್ರಾದಿಗಳ ವೃತ್ತಾಂತ, ಶಬರೀಪ್ರಸಂಗ ಮುಂತಾದ ಹಲವು ವಿವರಗಳು ಇಲ್ಲಿ ಕಾಣುವುದಿಲ್ಲ. ಇಡೀ ಉತ್ತರಕಾಂಡದ ಕಥೆಯೇ ಇಲ್ಲಿಲ್ಲ. ರಾಮನ ಕಥೆ-ರಾಜ್ಯಾಭಿಷೇಕದಲ್ಲಿ ಪರ್ಯವಸಾನವಾಗುತ್ತದೆ. ಬಾಲಕಾಂಡದಲ್ಲಿ ಬರುವ ಹಲವಾರು ಕಥೆಗಳೂ, ಉಪಕಥೆಗಳೂ, ಪ್ರಸಂಗಗಳೂ ಇಲ್ಲಿ ಬಂದಿಲ್ಲ. ಅಂದಮೇಲೆ ವಾಲ್ಮೀಕಿರಾಮಾಯಣವನ್ನೇ ಅವಲಂಬಿಸಿ ರಾಮೋಪಾಖ್ಯಾನವನ್ನು ಸಿದ್ಧಪಡಿಸಿದ್ದಾರೆ ಎನ್ನುವುದಕ್ಕಿಂತ ಎರಡೂ ಸ್ವತಂತ್ರ ಸಂಪ್ರದಾಯಗಳನ್ನು ಆಧಾರವಾಗಿರಿಸಿಕೊಂಡು ವಿರಚಿತವಾದವು ಎನ್ನಬಹುದು.

ವೀಬರ್ ಪಂಡಿತರೇನೋ ಮಹಾಭಾರತದಲ್ಲಿರುವ ರಾಮೋ-ಪಾಖ್ಯಾನವೇ ಹಿಂದಿನ ಕಥೆಯೆಂದೂ ಅದನ್ನೇ ವಿಸ್ತರಿಸಿ ಮುಂದೆ ವಾಲ್ಮೀಕಿರಾಮಾಯಣ ರೂಪಗೊಂಡಿತೆಂದೂ ವಾದ ಹೂಡಿದ್ದಾರೆ. ರಮೇಶಚಂದ್ರದತ್ತರೂ ಈ ವಾದಕ್ಕೆ ಹೂಗುಟ್ಟಿದ್ದಾರೆ. ಆದರೆ ನಮ್ಮ ಸಂಪ್ರದಾಯದ ಕಲ್ಪನೆಯಂತೆ ರಾಮಾಯಣವೇ ಪ್ರಾಚೀನಕೃತಿ. ಮಹಾಭಾರತದ ಕಾಲಕ್ಕೇ ರಾಮನ ಕಥೆ ಪ್ರಸಿದ್ಧವಾಗಿದ್ದಿತು; ಹಾಗೆಯೇ ಅಗ್ನಿ, ಪದ್ಮ, ಸ್ಕಾಂದ ಮುಂತಾದ ಹಲವಾಗು ಪುರಾಣಗಳಲ್ಲಿ ಕೂಡ ರಾಮನ ಕಥೆ ಬರುತ್ತದೆ. ಹೀಗೆ ಪ್ರಚಲಿತವಾಗಿದ್ದ ಜಾನಪದ ಕಥೆಯನ್ನು ವಾಲ್ಮೀಕಿಯು ಕಾವ್ಯದಲ್ಲೂ, ಮಹಾಭಾರತದ ಸಂಪಾದಕನು ಆಖ್ಯಾನದ ರೂಪದಲ್ಲೂ ರಚಿಸಿದರು ಎನ್ನಲು ಅಡ್ಡಿಯಿಲ್ಲ.

ವನಪರ್ವದಲ್ಲಿ ರಾಮೋಪಾಖ್ಯಾನ ಸಮಗ್ರವಾದ ಸುವಿಸ್ತಾರವಾದ ನಿರೂಪಣೆ. ಆದರೆ ರಾಮನ ಕಥೆಯ ಖಂಡಗಳು ದ್ರೋಣಪರ್ವದಲ್ಲೂ, ಶಾಂತಿಪರ್ವದಲ್ಲೂ, ಹರಿವಂಶವೆಂಬ ಭಾರತದ ಖಿಲದಲ್ಲೂ ಬರುತ್ತವೆ. ದ್ರೋಣಪರ್ವದ 56ನೆಯ ಅಧ್ಯಾಯದಲ್ಲಿ ಇಪ್ಪತ್ತೈದು ಶ್ಲೋಕಗಳಲ್ಲಿ ರಾಮಾಯಣದ ಕಥೆ, ರಾಮರಾಜ್ಯದಲ್ಲಿ ಇದ್ದ ಗುಣವಿಶೇಷಗಳು ಅಡಗಿವೆ. ಪುತ್ರಶೋಕಸಂತಪ್ತನಾದ ಸೃಂಜಯ (ಶ್ವೈತ್ಯ)ನನ್ನು ಕುರಿತು ನಾರದನು, "ನಿನ್ನ ಮಗನಿಗಿಂತ ಹೆಚ್ಚಿನ ಪುಣ್ಯದವರೇ ಸತ್ತರು, ನೀನು ಅಳಲೇಕೆ?" ಎಂದು ಸಮಾಧಾನ ಮಾಡುತ್ತ, ಮರುತ್ತ, ಸುಹೋತ್ರ, ಪೌರವ, ಶಿಬಿ, ರಾಮ, ಭಗೀರಥ, ದಿಲೀಪ, ಮಾಂಧಾತ, ಯಯಾತಿ, ಅಂಬರೀಷ, ಶತಬಿಂದು, ಗಯ, ರಂತಿದೇವ, ಭರತ, ಅಭಿಮನ್ಯು, ಪರಶುರಾಮ ಹೀಗೆ ಹದಿನಾರು ಹಿಂದಿನ ವೀರರ ವೃತ್ತಾಂತವನ್ನು ಹೇಳುತ್ತಾನೆ. ಅವರಲ್ಲಿ ಪ್ರತಿಯೊಬ್ಬರೂ ಗುಣಶಾಲಿಗಳು, ಅಮಿತ ತೇಜಸ್ವಿಗಳು, ಮಹಾವೀರರು; ಕೇಳುತ್ತಿರುವ ಸೃಂಜಯುನಿಗಿಂತ ನಾಲ್ಕು ಪಾಲು ಹೆಚ್ಚಿನ ಮಂಗಳದವರು (ಚತುರ್ಭದ್ರತರಸ್ತ್ವಯಾ); ಹಾಗಿದ್ದರೂ ಸತ್ತರಷ್ಟೆ? ರಾಮನ ವಿಚಾರವನ್ನೂ ಹೀಗೆಯೇ "ರಾಮಂ ದಾಶರಥಿಂ ಚೈವ ಮೃತಂ ಸೃಂಜಯ ಶುಶ್ರುಮ" ಎಂದು ರಾಮನು ತೀರಿಕೊಂಡದ್ದರಿಂದ ಆರಂಭಿಸಿ ರಾಮ ರಾಜ್ಯವಾಳುತ್ತಿದ್ದಾಗ (ರಾಮೇ ರಾಜ್ಯಂ ಪ್ರಶಾಸತಿ) ಅನಾವೃಷ್ಟಿಭಯವಾಗಲೀ ದುರ್ಭಿಕ್ಷವಾಗಲೀ ವ್ಯಾಧಿಗಳಾಗಲೀ ಇರಲಿಲ್ಲ ಎಂದು ಹೇಳುತ್ತಾನೆ.

> "ಸರ್ವಂ ಪ್ರಸನ್ನಮೇವಾಸೀತ್ ಅತ್ಯಂತ ಸುಖಸಂಯುತಂ,
> ಏವಂ ಲೋಕೋಽಭವತ್ ಸರ್ವೋ
> ರಾಮೇ ರಾಜ್ಯಂ ಪ್ರಶಾಸತಿ".

ಮತ್ತೆ ಪ್ರಜೆಗಳಲ್ಲೆಲ್ಲ ರಾಮನ ಮಾತೇ ಮಾತಾಗಿದ್ದಿತು :

> "ರಾಮೋ ರಾಮೋ ರಾಮ ಇತಿ ಪ್ರಜಾನಾಮಭವತ್ ಕಥಾ
> ರಾಮಾದ್ ರಾಮಂ ಜಗದಭೂತ್ ರಾಮೇ ರಾಜ್ಯಂ ಪ್ರಶಾಸತಿ".

ಹೀಗೆ ಸರ್ವಭೂತಮನಃಕಾಂತನಾಗಿದ್ದ ರಾಮನೂ ಕಡೆಗೆ ಸತ್ತನು. ಆದ್ದರಿಂದ "ಮಾ ಪುತ್ರಂ ಅನುತಪ್ಯಥಾಃ".

ಇದೇ ವಸ್ತುವೇ ಶಾಂತಿಪರ್ವದ 26ನೆಯ ಅಧ್ಯಾಯದಲ್ಲೂ ಮರಳಿ ಬಂದಿದೆ; ಮೇಲಿನ ಶ್ಲೋಕಗಳೇ ಬಹುಮಟ್ಟಿಗೆ ಪುನರಾವರ್ತಿತವಾಗಿವೆ. ಆದರೆ ಇಲ್ಲಿ ಜ್ಞಾತಿಶೋಕಸಂತಪ್ತನಾದ ಯುಧಿಷ್ಠಿರನನ್ನು ಕೃಷ್ಣನು ಹಿಂದಿನ ವೀರರ ನಿದರ್ಶನದಿಂದ ಸಮಾಧಾನ ಮಾಡುತ್ತಾನೆ. 'ರಾಮೇ ರಾಜ್ಯಂ ಪ್ರಶಾಸತಿ' ಎಂದು ಮುಗಿಯುವ ರಾಮರಾಜ್ಯದ ವೈಭವವನ್ನು ಹೇಳುವ ಆರು ಶ್ಲೋಕಗಳಿವೆ. ಆದರೆ ರಾಮನ ಕಥೆಯೇನೂ ಬರುವುದಿಲ್ಲ. ವನಪರ್ವದ 25ನೆಯ ಅಧ್ಯಾಯದಲ್ಲಿ ದ್ವೈತವನವನ್ನು ಪ್ರವೇಶಮಾಡಿದ ಪಾಂಡವರನ್ನು ನೋಡಿ ಮಾರ್ಕಂಡೇಯಋಷಿ ರಾಮನನ್ನು ನೆನೆಸಿ-ಕೊಳ್ಳುತ್ತಾನೆ. ಪಾಂಡವರಂತೆಯೇ ಕಷ್ಟದಲ್ಲಿ ಸಿಕ್ಕ, ಸತ್ಯವ್ರತನಾದ ದಾಶರಥಿಯು ತಂದೆಯ ಆಣತಿಯಂತೆ ಲಕ್ಷ್ಮಣನೊಂದಿಗೆ ಧನಸ್ಸು ಹಿಡಿದು ಕಾಡಿನಲ್ಲಿ ಅಲೆದಾಡುತ್ತಿದ್ದಾಗ ಋಷ್ಯಮೂಕಪರ್ವತದ ಮೇಲೆ ಮಾರ್ಕಂಡೇಯ ಅವನನ್ನು ಸಂಧಿಸಿದ್ದನಂತೆ. ರಾಮನನ್ನು 'ಸಹಸ್ರನೇತ್ರಪ್ರತಿಮ', 'ಮಹಾತ್ಮ', 'ಮಹಾನುಭಾವ', 'ಸಮರೇಷ್ವಜೇಯ', 'ಯಮಸ್ಯ ನೇತಾ ನಮುಚೇಶ್ಚ ಹಂತಾ' ಎಂದು ಮುಂತಾಗಿ ವರ್ಣಿಸಿದ್ದಾನೆ. ನಾಲ್ಕು ಶ್ಲೋಕಗಳಲ್ಲಿ ಬರುವ ಈ ರಾಮನ ಪ್ರಸ್ತಾಪದಲ್ಲಿ ಸೀತೆಯ ಉಲ್ಲೇಖವಿಲ್ಲ; ಕಾಡಿಗೆ ಹೋದದ್ದು 'ಸ ಚಾಪಿ ರಾಜಾ ಸಹ ಲಕ್ಷ್ಮಣೇನ' ಎಂದಷ್ಟೇ ಹೇಳಿದ್ದಾರೆ. ರಾಮನನ್ನು ಹೆಸರಿಸಿದ ಉಸಿರಿನಲ್ಲೇ ಮಾರ್ಕಂಡೇಯನು ನಾಭಾಗ, ಭಗೀರಥ ಮುಂತಾದ 'ಭೂಪ'ರನ್ನೂ ಹೆಸರಿಸಿದ್ದಾನೆ. ಬಲಿಷ್ಠರಾದರೂ ಅಧರ್ಮ ಮಾಡಲಿಲ್ಲವೆಂದು ಇವರೆಲ್ಲರ ಹೆಗ್ಗಳಿಕೆ.

ಅಂತೂ ಹಿಂದೆ ಇದ್ದು ಆಳಿ, ಕೀರ್ತಿಶೇಷರಾದ ರಾಜರ ಪಟ್ಟಿಯಲ್ಲಿ ರಾಮನು ಸೇರಿದ್ದಾನೆ. ರಾಮನೆಂಬ ರಾಜನ ಶುಭ್ರವಾದ ಯಶಸ್ಸು ಆಗಲೇ ಪ್ರಸಿದ್ಧವಾಗಿದ್ದುದು ಮಹಾಭಾರತದ ಹಲವೆಡೆ ತಿಳಿದುಬರುತ್ತದೆ. ರಾಮ

- ರಾವಣರ ಯುದ್ಧ ಅದ್ಭುತವಾಗಿದ್ದಿತೆಂಬುದೂ ಆಗಿನ ಪ್ರಖ್ಯಾತಿಯೇ. ದ್ರೋಣಪರ್ವದಲ್ಲಿ ಘಟೋತ್ಕಚನು - ಭೀಮಸೇನರ ದ್ವಂದ್ವಯುದ್ಧವನ್ನು ವರ್ಣಿಸುತ್ತಾ "ಯಾದೃಶಂ ಹಿ ಪುರಾವೃತ್ತಂ ರಾಮರಾವಣಯೋರ್ಮೃಧೇ" ಎಂದು ಸಂಜಯ ಹೇಳುತ್ತಾನೆ (96ನೆಯ ಅಧ್ಯಾಯ, ಶ್ಲೋಕ 28). ರಾಮ - ರಾವಣರ ನಡುವೆ ನಡೆದ ಯುದ್ಧವನ್ನು "ಹಿಂದೆ ನಡೆದದ್ದು" (ಪುರಾವೃತ್ತಂ) ಎಂದು ಹೇಳಿರುವುದನ್ನು ಗಮನಿಸಬೇಕು. ಪುನಃ ಅದೇ ಪರ್ವದ 194ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು ಅಶ್ವತ್ಥಾಮನ ವಿಚಾರವನ್ನು ಹೇಳುತ್ತ 'ಮಹೋದಧಿಯಂತೆ ಅಕ್ಷೋಭ್ಯನಾದವನು - ದಶರಥನ ಮಗ ರಾಮನಂತೆ', (ಶ್ಲೋಕ 12) ಎಂದು ಹೇಳುತ್ತಾನೆ. ರಾಮನ ಕೀರ್ತಿ ಹೀಗೆ ಮಹಾಭಾರತದಲ್ಲಿ ವಿಶಾಲವಾಗಿ ಹರಡಿದೆ. ದೈವತ್ವದ ಆರೋಪಣೆ ಇಲ್ಲಿ ಇಲ್ಲವೇ ಇಲ್ಲವೆನ್ನಬಹುದು. ಮನುಷ್ಯನಾದ ರಾಜ ತನ್ನ ಹಿರಿಮೆಯಿಂದ ಅಜರಾಮರವಾದ ಯಶಸ್ಸಿಗೆ ಆಕರನಾದನೆಂದು ಹೇಳಲು ಅಡ್ಡಿಯಿಲ್ಲ.

ಆದರೆ ಇದಕ್ಕೆ ಅಪವಾದವೆಂಬಂತೆ ವನಪರ್ವದಲ್ಲಿ ಹನುಮಂತನೇ ಹೇಳುವ ರಾಮನ ಕಥೆಯಲ್ಲಿ ಅವತಾರದ ಸೂಚನೆಯಿದೆ. ಭೀಮಸೇನನು ಲೋಮಶ ತೀರ್ಥಯಾತ್ರೆ ಮಾಡುತ್ತ ಕದಲೀಷಂಡವನ್ನು ಹೊಕ್ಕಾಗ ಹನುಮಂತನನ್ನು ಸಂಧಿಸುತ್ತಾನೆ. ಮಾತಿಗೆ ಮಾತು ಬೆಳೆದು ಭೀಮನು 'ಗುಣಶ್ಲಾಘ್ಯ'ನಾದ, 'ಬುದ್ಧಿಸತ್ತ್ವಬಲಾನ್ವಿತ'ನಾದ, 'ರಾಮಾಯಣದಲ್ಲಿ ಅತಿವಿಖ್ಯಾತನಾದ', 'ವಾನರ ಪುಂಗವ'ನಾದ ಹನುಮಂತನನ್ನು ಹೆಸರಿಸುತ್ತಾನೆ. ಆಗ ಹನುಮಂತನು ಒಲಿದು ತನ್ನ ವೃತ್ತಾಂತವನ್ನು ಹೇಳಿಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ಸಂಕ್ಷೇಪವಾಗಿ ರಾಮಾಯಣದ ಕಥೆಯ ನಿರೂಪಣೆಯಿದೆ. ರಾಮನ ವಿಚಾರ ಹೇಳುತ್ತ 'ಅಥ ದಾಶರಥಿರ್ವೀರೋ ರಾಮೋ ನಾಮ ಮಹಾಬಲಃ। ವಿಷ್ಣುರ್ಮಾನುಷರೂಪೇಣ ಚಚಾರ ವಸುಧಾತಲಂ" ಎನ್ನುವ ಮಾತು ಬರುತ್ತದೆ. ವಿಷ್ಣುವು ಮನುಷ್ಯರೂಪದಿಂದ ಭೂಮಿಯ ಮೇಲೆ ಬಂದನೆಂಬುದು ಭಕ್ತಿಯಿಂದ ಹೇಳಿದ ಔಪಚಾರಿಕವಾದ

ಮಾತೋ, ಅಥವಾ ನಿಜವಾಗಿ ಅವತಾರದ ಕಲ್ಪನೆಯನ್ನು ಇಲ್ಲಿ ಕಾಣಬಹುದೋ, ನಿರ್ಧರಿಸುವುದು ಕಷ್ಟ. ಅಂತೂ ಇದೊಂದು ಉಲ್ಲೇಖವನ್ನು ಬಿಟ್ಟರೆ ಮಹಾಭಾರತದಲ್ಲಿ ರಾಮನು ಎಷ್ಟು ಮಹಾತ್ಮನಾದರೂ ಮನುಷ್ಯಮಟ್ಟವನ್ನು ಮೀರಿಲ್ಲ, ಮೀರುವ ಪ್ರಸಂಗ ಅವನಿಗೆ ಒದಗಲಿಲ್ಲ.

ವಾಲ್ಮೀಕಿಯ ರಾಮಾಯಣದಲ್ಲಿ ಮಹಾಭಾರತದ ಕಥೆಯಾಗಲೀ, ಪ್ರಸ್ತಾಪವಾಗಲೀ, ಪಾತ್ರಗಳ ಉಲ್ಲೇಖವಾಗಲೀ ಬರುವುದಿಲ್ಲ. ಆದರೆ ಇದೊಂದರಿಂದ ವಾಲ್ಮೀಕಿ ರಾಮಾಯಣದ ಪ್ರಾಚೀನತೆಯನ್ನು ಸಾಧಿಸುವುದು ಆಗದು. ಅಪರಿಮಿತ ವ್ಯಾಪ್ತಿಯಿರುವ ಮಹಾಭಾರತದ ಸ್ವರೂಪವೇ ವಿವಿಧ ಆಖ್ಯಾನಗಳ, ಉಪಾಖ್ಯಾನಗಳ, ವೃತ್ತಾಂತಗಳ, ಉಲ್ಲೇಖಗಳ ಸಂಗ್ರಹ; ಅದರಲ್ಲಿ ಏಕರಸವೆಂಬುದು ಬಹು ದೀರ್ಘಸೂತ್ರ. ಆದರೆ ರಾಮಾಯಣದ ವಸ್ತು ಪರಿಮಿತವಾದದ್ದು. ಅದು ಕೆಲವೇ ಪ್ರಸಂಗಗಳನ್ನು ಹಿಡಿದು ಅವುಗಳ ಸುತ್ತ ನಾಜೂಕಾಗಿ ಹೆಣೆದಿರುವ ಕಾವ್ಯವೇಣಿ. ಅದರಲ್ಲಿ ಬೇರೆ ವಿಷಯಕ್ಕೆ, ಬೇರೆ ಮಾತಿಗೆ ಅವಕಾಶವಿಲ್ಲ. ಅನ್ಯೈಜವಾಗಿ ಬೆಳೆದಿರುವ ಇಡೀ ಉತ್ತರಕಾಂಡ ಮತ್ತು ಬಾಲಕಾಂಡದ ಬಹುಭಾಗಗಳನ್ನು ಬಿಟ್ಟರೆ ಉಳಿದ ಎಲ್ಲೂ ಯಾವ ಆಖ್ಯಾನವೂ ಕಾಣಬರುವುದಿಲ್ಲ. ಅದುಕಾರಣ ಮಹಾಭಾರತದ ಪ್ರಸ್ತಾಪ ಅಲ್ಲಿ ಬರದಿದ್ದರೆ ಆಶ್ಚರ್ಯವೇನಲ್ಲ.

ಮಹಾಭಾರತದ ಮುಖ್ಯಪಕ್ಷಗಳಾದ ಕುರುಗಳ ಮತ್ತು ಭರತರ ಉಲ್ಲೇಖ ವೈದಿಕವಾಙ್ಮಯದಲ್ಲೇ ಬರುತ್ತದೆ; ಭಾರತಯುದ್ಧ ಪಾಣಿನಿಗೆ ತಿಳಿದಿದ್ದಿತೆಂದು ಹೇಳಲು ಆಧಾರವುಂಟು. ಮಹಾಭಾರತದ ವಸ್ತುವಾದ ಯುದ್ಧವು ದ್ವಾಪರಯುಗದ ಅಂತ್ಯದಲ್ಲಿ, ಅಂದರೆ ಕ್ರಿಸ್ತಪೂರ್ವ 3139ರಲ್ಲಿ ನಡೆಯಿತೆಂದು ಸಾಂಪ್ರದಾಯಿಕವಾದ ಶ್ರದ್ಧೆ; ಇದು 830 ವರ್ಷಗಳ ಹಿಂದಿದ್ದ ಕಲ್ಹಣನ ಕಾಲದಿಂದ ಬಲವಾಗಿರುವ ಶ್ರದ್ಧೆ. ಆದರೆ ಭಾರತವೆಂಬ

ಗ್ರಂಥದ ಪ್ರಪ್ರಥಮ ಉಲ್ಲೇಖ ನಮಗೆ ಕಾಣಿಸುವುದು ಆಶ್ವಲಾಯನ ಗೃಹ್ಯಸೂತ್ರದಲ್ಲಿ; ಎಂದರೆ ಕ್ರಿಸ್ತಪೂರ್ವ ಐದನೆಯ ಶತಮಾನದ ಸುಮಾರಿಗೆ ಭಾರತದ ಪ್ರಾಚೀನ ಸಂಸ್ಕರಣವಂತೂ ಸಿದ್ಧವಾಗಿರಬಹುದು. ಕಾಲಾನುಕ್ರಮದಲ್ಲಿ ಗ್ರಂಥ ಹಿಗ್ಗಿಬಂದಿತೆಂಬುದು ನಿರ್ವಿವಾದ. ನಮ್ಮಲ್ಲಿ ಇಂದು ಪ್ರಸಿದ್ಧವಾಗಿರುವ ಮಹಾಭಾರತದ ಪಾಠ ಕ್ರಿಸ್ತಾಬ್ದ ಮೊದಲೆರೆಡು ಶತಮಾನಗಳದ್ದೆಂದು ತಜ್ಞರ ಅಭಿಪ್ರಾಯ. ಮುಂಚಿನ ಪಾಠಗಳಲ್ಲಿ ರಾಮನ ಕಥೆ ಇದ್ದಿತೋ, ಇಲ್ಲವೋ ಹೇಳಲು ಬರುವುದಿಲ್ಲ.



**ಶ್ಲೋಕವಾಗಲಿ, ಶಾಪವಾಗುವುದು ಬೇಡ**

'ನಾನು ಶೋಕದಿಂದ ಅಂದ ಮಾತು ಶ್ಲೋಕವಾಗಲಿ ಅಷ್ಟೆ, ಶಾಪವಾಗದಿರಲಿ' ಎಂದು ವಾಲ್ಮೀಕಿ ಬಯಸಿದನು. ಈ ಶ್ಲೋಕವೇ ರಾಮಾಯಣದ ಬೀಜವಾಯಿತು.

## (೭) ನೆರೆನಾಡುಗಳಲ್ಲಿ ರಾಮನ ಕಥೆ

ಕ್ರಿಸ್ತಾಬ್ದದ ತರುಣದಲ್ಲೇ ಭಾರತೀಯ ಸಂಸ್ಕೃತಿಯು ನೆರೆನಾಡುಗಳಲ್ಲಿ ಕಾಲಿಟ್ಟು ಬೆಳೆಯಿತಷ್ಟೆ. ನಮ್ಮ ಸಂಸ್ಕೃತಿಯ ಸಂಪರ್ಕದಿಂದಲೇ ಬಲಗೊಂಡು ಸಿಂಹಳ, ಬರ್ಮ, ಕಂಬುಜ, ಅನ್ನಾಂ, ಮಲಯ, ಸುಮಾತ್ರ, ಜಾವಾ, ಚೀನ, ಚೀನೀತುರ್ಕಿಸ್ಥಾನ, ಇಂಡೋಚೀನ, ಟಿಬೆಟ್ ಮುಂತಾದ ರಾಷ್ಟ್ರಗಳ ವಿಭಿನ್ನ ಸಂಸ್ಕೃತಿಗಳು ಊರ್ಜಿತವಾದುವು. ಭಾರತದಿಂದ ಹೀಗೆ ಪ್ರಭಾವಿತವಾದ ದೇಶಗಳನ್ನೆಲ್ಲ ಒಟ್ಟಾರೆ ವಿಶಾಲಭಾರತ ಅಥವಾ ಬೃಹದ್ಭಾರತವೆಂದು ವ್ಯವಹರಿಸುವ ಪರಿಪಾಠವಿದೆ. ವಿಶಾಲ ಭಾರತದ ಸಮಷ್ಟಿರೂಪಕ್ಕೆ ಆಧಾರವಾಗಿ ಉಳಿದಿರುವ ವಿವರಗಳಲ್ಲಿ ಪ್ರಮುಖವಾದುದು ರಾಮಾಯಣ. ರಾಮನ ನಿರವಧಿಕ ಚಾರಿತ್ರ, ವಾಲ್ಮೀಕಿಯ ಅನುಪಮ ಕಾವ್ಯ ಎರಡೂ ಕಲೆತು ನಮ್ಮ ದೇಶದಲ್ಲಿ ರಾಮನ ಕಥೆ ಜನಪ್ರಿಯವಾಯಿತು. ಈ ಜನಪ್ರಿಯತೆಯೇ ವಿಶಾಲ ಭಾರತದ ನಾಡುಗಳಿಗೆಲ್ಲ ರಾಮನ ಕಥೆಯನ್ನು ಒಯ್ದಿತು. ಆ ದೇಶಗಳ ಸಾಹಿತ್ಯದಲ್ಲಿ, ಚಿತ್ರಕಲೆಯಲ್ಲಿ, ಶಿಲ್ಪದಲ್ಲಿ, ನೃತ್ಯದಲ್ಲಿ ರಾಮಾಯಣದ ಪ್ರಭಾವ ಫಲಿಸಿಬಂದಿತು.

ಈ ನಾಡುಗಳಿಗೆ ಹರಡಿದ ರಾಮನ ಕಥೆಗೆ ಆಕರ ಯಾವುದು? ಇಲ್ಲೆಲ್ಲ ಪ್ರಚಲಿತವಾಗಿರುವ ಕಥೆಗಳಲ್ಲಿ ಸ್ಥೂಲವಾದ ನಡೆ ಒಂದೇ ಇದ್ದರೂ ವಿವರಗಳಲ್ಲಿ ತುಂಬ ವೈವಿಧ್ಯ ವ್ಯಕ್ತವಾಗುತ್ತದೆ. ಅವುಗಳಲ್ಲಿ ಹಲವು ನಮ್ಮ ಸಂಪ್ರದಾಯದ ಜಾಡನ್ನು ಬಿಟ್ಟವು, ನಮ್ಮ ಸಾಂಸ್ಕೃತಿಕ ಮನೋಧರ್ಮಕ್ಕೆ ಅಸಮಂಜಸವಾದವು, ಆಯಾ ದೇಶಗಳ ಪೂರ್ವೇತಿಹಾಸವನ್ನು ಅವಲಂಬಿಸಿದವು. ವಾಲ್ಮೀಕಿಯ ಆದಿಕಾವ್ಯವೇ ಮೂಲಾಧಾರವೆಂದರೂ

ಇಲ್ಲಿಯೇ ಜನಗಳ ನಡುವೆ ಬಳಕೆಯಲ್ಲಿದ್ದ ಹಲವಾರು ಇತರ ಇತಿವೃತ್ತಗಳೂ ವಿಶಾಲಭಾರತದ ರಾಮಾಯಣಗಳಲ್ಲಿ ಸೇರಿವೆಯೆಂದು ಒಪ್ಪಬೇಕು.

ಕ್ರಿಸ್ತಶಕದ ಆದಿಶತಕದಲ್ಲೇ ಸಂಸ್ಕೃತರಾಮಾಯಣ ಜಾವಾ ದೇಶವನ್ನು ಪ್ರವೇಶಿಸಿತು. ಆಗಿನ ಜಾವಾ ಅರಸರು ಹಿಂದುಗಳು, ಶೈವ ಪಕ್ಷಪಾತಿಗಳು. ಅವರ ರಾಜಧಾನಿಯು ಮಜಪಹಿತ್ ಎಂಬ ನಗರ; ಅದರ ಪರಿಸರದಲ್ಲಿ ಸೆಲಕೆಲಿರ್ ಎಂಬ ಬೆಟ್ಟವಿದ್ದಿತು. ಇಲ್ಲಿಯೂ ಪೂರ್ವಜಾವಾದ ಪನತರನ್ ಎಂಬಲ್ಲಿಯೂ ಹಲವಾರು ಶಿವ ದೇವಾಲಯಗಳನ್ನು ಈ ರಾಜರು ಕಟ್ಟಿಸಿದರು. ಇಲ್ಲಿ ಪ್ರಾಕಾರಗಳ ಮೇಲೆ ರಾಮಾಯಣದ ವಸ್ತುಗಳನ್ನು ಶಿಲ್ಪದಲ್ಲಿ ಬಿಡಿಸಿರುವುದನ್ನು ಕಾಣಬಹುದು. ಪ್ರಂಬನನ್ ಎಂಬಲ್ಲಿನ ಲಾರಾ ಜೋಂಗ್ರಂಗ್ ದೇವಾಲಯದಲ್ಲಿ ನಲವತ್ತೆರಡು ಶಿಲ್ಪ ಚಿತ್ರಗಳು ರಾಮನ ಕಥೆಯನ್ನು ನಿರೂಪಿಸುತ್ತವೆ. ರಾಮನ ಸೈನ್ಯ ಲಂಕಾನಗರವನ್ನು ಮುಟ್ಟಿದುದೇ ಈ ನಿರೂಪಣೆಯ ಕೊನೆಯ ಘಟ್ಟ. ಉತ್ತರಕಾಂಡದ ಕಥೆ ಈ ಕಡೆ ಪ್ರಚಲಿತವಾಗಿಲ್ಲ. ಇಲ್ಲಿ ಬಳಕೆಯಲ್ಲಿರುವ ಕವಿಭಾಷೆಯ ರಾಮಾಯಣವು ಲಂಕಾಕಾಂಡದಲ್ಲೇ ಸಮಾಪ್ತವಾಗುತ್ತದೆ. ನಮ್ಮಲ್ಲಿ ರಾಮನು ಒಂದೇ ಅಶ್ವಮೇಧಯಾಗ ಮಾಡಿದನಾದರೆ ಜಾವಾನೀ ರಾಮಾಯಣದಲ್ಲಿ ಹತ್ತು ಅಶ್ವಮೇಧಯಾಗಗಳನ್ನು ಮಾಡಿದವನು ರಾಮ.

ಶಿಲ್ಪ ಚಿತ್ರಗಳೂ ಮೇಲೆ ಹೇಳಿದ ಕವಿರಾಮಾಯಣವೂ ಬಹುಮಟ್ಟಿಗೆ ವಾಲ್ಮೀಕಿಯ ಕಥೆಯನ್ನೇ ಅವಲಂಬಿಸಿವೆಯೆನ್ನಬಹುದು. ಆದರೆ ವಾಲ್ಮೀಕಿಯ ಜಾಡನ್ನು ಹಿಡಿಯದೆ ಬೇರೊಂದು ಸಂಪ್ರದಾಯವನ್ನು ಅನುಸರಿಸಿ ನಿಂತ ರಾಮಾಯಣದ ಪಾಠವೊಂದು ಜಾವಾದಲ್ಲಿ ಬಳಕೆಯಲ್ಲಿದೆ. ಈ ದೇಶದಲ್ಲಿ ಜನಪ್ರಿಯವಾಗಿರುವ ವಯಂಗ್ ಎಂಬ ಛಾಯಾಚಿತ್ರ ನೃತ್ಯ ನಿರೂಪಣೆಗಳೂ ಈ ಸಂಪ್ರದಾಯದಿಂದಲೇ ಪ್ರಭಾವಿತವಾದಂತೆ ತಿಳಿದುಬರುತ್ತದೆ. ಜಾವಾ ದೇಶದ ಪ್ರಾಚೀನ ಭಾಷೆ

ಕಕವಿನ್ ಎಂಬುದು; ಸಂಸ್ಕೃತ ಮತ್ತು ಪಾಲಿನೀಷ್ಯನ್ ಭಾಷೆಗಳ ಮಿಶ್ರಣದಿಂದ ಉದ್ಭೂತವಾದ ಭಾಷೆಯಿದು. ಈ ಭಾಷೆಯಲ್ಲಿ ಕ್ರಿಸ್ತಾಬ್ದ 1104ರ ಸುಮಾರಿಗೆ ವಿರಚಿತವಾದ ರಾಮಾಯಣದ ಪಾಠವೊಂದು ಉಳಿದುಬಂದಿದೆ. ಈ ಪಾಠವು ವೈಷ್ಣವ ಧರ್ಮದಿಂದ ಪ್ರಭಾವಿತವಾದದ್ದು. ಇದರಲ್ಲಿ ರಾವಣನ ಪೂರ್ವಚರಿತ್ರೆಯಾಗಲೀ ಯುದ್ಧೋತ್ತರಕಾಂಡದ ಪ್ರಸ್ತಾಪವಾಗಲೀ ಬರುವುದಿಲ್ಲ. ಇದೇ ದೇಶದಲ್ಲಿ ಜಸಧಿಪುರನೆಂಬಾತ ರಚಿಸಿದ 'ಸೆರತ್‌ರಾಮ' ಎಂಬ ಇನ್ನೊಂದು ರಾಮಾಯಣವೂ ಬಳಕೆಯಲ್ಲಿದೆ. ಇದರಲ್ಲಿ ರಾವಣನ ಪೂರ್ವಕಥೆ ಸುವಿಸ್ತಾರವಾಗಿ ಬರುತ್ತದೆ. ಉತ್ತರಕಾಂಡದ ಕಥೆಯನ್ನು ಸಂಗ್ರಹವಾಗಿ ಹೇಳುವ ಗದ್ಯಗ್ರಂಥವೊಂದೂ ಈ ಕಡೆ ಉಳಿದಿದೆ. ಇವೆರಡೂ ಅರ್ವಾಚೀನ ಕೃತಿಗಳು.

ಭಾರತಭೂಭಾಗಕ್ಕೆ ಮೈತಾಕಿಸಿ ನಿಂತ ಮಲಯವು ಒಂದು ಕಾಲಕ್ಕೆ ಜಾವಾದ ಅರಸರ ಅಂಕೆಯಲ್ಲೇ ಇದ್ದಿತು. ಮಲಯದಲ್ಲಿ ಬಳಕೆಯಲ್ಲಿದ್ದ ರಾಮನ ಕಥೆಗಳೂ ಜಾವಾ ದೇಶದಲ್ಲಿ ಪ್ರಚಲಿತವಾದುವು. ಮಲಯದಲ್ಲಿ ಹದಿನಾಲ್ಕಕ್ಕೂ ಮೀರಿ ರಾಮನ ಕಥೆಗಳು ಬಳಕೆಯಲ್ಲಿವೆ. ಇವುಗಳಲ್ಲಿ ಭಾರತೀಯ ವಿವರಗಳೊಂದಿಗೆ ಮಲಯಾ ಜಾನಪದ ಗಾಥೆಗಳೂ ಸೇರಿ ಸ್ವಾರಸ್ಯವಾದ ಕಥೆಗಳಾಗಿವೆ. ತಂದೆಯಿಂದ ಹೊರದೂಡಲ್ಪಟ್ಟ ರಾವಣನು ನಾವೆಯೊಂದನ್ನೇರಿ ಸೆರೆನ್ ದೀಪ (ಎಂದರೆ ಸಿಂಹಳ ದ್ವೀಪ)ವನ್ನು ಸೇರಿ, ಅಲ್ಲಿ ಹನ್ನೆರಡು ವರ್ಷಗಳು ಉಗ್ರತಪಶ್ಚರ್ಯೆ ಮಾಡಿ ಆದಂ(!)ನನ್ನು ಪ್ರತ್ಯಕ್ಷ ಮಾಡಿಕೊಳ್ಳುತ್ತಾನೆ. ಹಿಂದೂ ರಾಮಾಯಣದಲ್ಲಿ ಮುಸ್ಲಿಂ ಆದಂ ಬರುವ ಸಂದರ್ಭ ಸ್ವಾರಸ್ಯವಾದುದು. ಜಾವಾ ಕದಿರಿಯ ರಣವಿಜಯರಾಜನ ನಂತರ ಪೂರ್ವತೀರದ ಮುಸ್ಲಿಮರು ಪ್ರಬಲರಾಗಿ, ಮಲಯ, ಮಲಚ್ಚ, ಷಹಾಂಗ್, ಮುಂತಾದೆಡೆಗಳಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿಕೊಂಡರು. ಇವರು ಮೊದಲಿಗೆ ಮಲಬಾರ್ ಮತ್ತು ಕೋರಮಂಡಲ ತೀರದವರಾದುದರಿಂದ ಹಿಂದೂ ಸಂಸ್ಕೃತಿಯನ್ನು ಅಪ್ಪಿಪ್ಪ

ಅರಗಿಸಿಕೊಂಡಿದ್ದರು. ಅಷ್ಟೇ ಅಲ್ಲ, ತಮ್ಮ ಮೂಲ ಪುರುಷನು ಮಲಚ್ಚದ ಪರಮೇಶ್ವರನೆಂಬ ಹಿಂದೂ ದೊರೆಯೆಂದೇ ಅವರ ಕಲ್ಪನೆಯಿದ್ದಿತು. ಇದು ರಾವಣನಿಗೂ ಆದಂಗೂ ಒದಗಿದ ಸಂಬಂಧದ ಹಿನ್ನೆಲೆ.

ಮಲಯದ ರಾಮಾಯಣಗಳಲ್ಲಿ ಪ್ರಮುಖವಾದುದು 'ಹಿಕಾಯತ್ ಸೆರಿ ರಾಮ' ಎಂಬುದು. ಪ್ರಾಚೀನ ಪಾಠಗಳೆನಿಸಿದ 'ರಾಮಕ್ಲಿಂಗ್' ಮತ್ತು 'ಸೆರತ್ ಕಂಡ' ಎರಡನ್ನೂ ಅವಲಂಬಿಸಿಯೇ ರಾಮಾಯಣವು ಸಿದ್ಧವಾಯಿತೆಂದು ಹೇಳುತ್ತಾರೆ. ದಶಮುಖನು ವಿದ್ಯಾಧರಿಯೊಬ್ಬಳನ್ನು ಮೋಹಿಸಿ ಅವಳನ್ನು ಬಲಾತ್ಕಾರವಾಗಿ ಅಪಹರಿಸಿದುದೂ, ಅವಳಿಂದ ಇಂದ್ರಜಿತ್ತು ಹುಟ್ಟಿದುದೂ 'ರಾಮಕ್ಲಿಂಗ್'ನಲ್ಲಿ ವಿಸ್ತಾರವಾಗಿ ಬರುತ್ತದೆ. 'ಸೆರತ್ ಕಂಡ'ವೆಂಬುದು ಹಲವು ಗ್ರಂಥಗಳ ಸಂಕಲನ. ಇಲ್ಲಿ ವಿಚಿತ್ರವಾದ ವಿವರಗಳು ಕಾಣಿಸಿಕೊಳ್ಳುತ್ತವೆ. ಮೆಕ್ಕ ಪಟ್ಟಣದಲ್ಲಿ ಆದಂ ತನ್ನ ಮಕ್ಕಳಾದ ಸೈತಾನ್, ಅಬಿಲ್ ಮತ್ತು ಕಬಿಲ್‌ರೊಡನೆ ಇದ್ದುದರಿಂದ ಆರಂಭವಾಗುವ ಈ ಸಂಕಲನದಲ್ಲಿ ಹಿಂದೂ, ಕ್ರೈಸ್ತ, ಮುಸ್ಲಿಂ ದೇವತೆಗಳು ನಿರಾತಂಕವಾಗಿ ಓಡಿಯಾಡುತ್ತಾರೆ. ನೋಆ ಎಂಬ ಪುರುಷನಿಗೂ ಉಮಾ ಎಂಬ ಸ್ತ್ರೀಗೂ ಬೆಳೆದುಬಂದ ಬಾಂಧವ್ಯದ ಫಲವಾಗಿ ಶಿವ ಹುಟ್ಟಿಕೊಳ್ಳುತ್ತಾನೆಂದು ಇಲ್ಲಿ ಬರುವ ವಿವರ.

ವಿಷ್ಣುವಿನ ಮತ್ತು ಪ್ರಾಚೀನ ಜಾವಾನೀ ದೊರೆಗಳ ಪೂರ್ವೇತಿಹಾಸವೇ ಸುಮಾರು ಇಪ್ಪತ್ತು ಪರಿಚ್ಛೇದಗಳನ್ನು ಆಕ್ರಮಿಸಿದೆ. ಇಪ್ಪತ್ತೆರಡನೆಯ ಪರಿಚ್ಛೇದದಲ್ಲೇ ರಾಮನ ಕಥೆಯು ಆರಂಭವಾಗುವುದು. ಆದರೆ ನಲವತ್ತೈದನೆಯ ಪರಿಚ್ಛೇದದವರೆಗೂ ರಾಮನ ಮತ್ತು ರಾವಣನ ಪೂರ್ವಜರ ಪುರಾಣವೇ ಬಂದಿದೆ. ಜಾವಾನೀ ದೊರೆಗಳು ರಾಮನ ವಂಶಜರೆಂದು ಅಲ್ಲಿನವರ ಶ್ರದ್ಧೆಯಾದುದರಿಂದ ರಾಮನ ವಂಶವೃತ್ತಕ್ಕೆ ಇಷ್ಟು ಪ್ರಾಶಸ್ತ್ಯ. ಇಲ್ಲಿ ರಾಮನನ್ನು ಭಾರ್ಗವನೆಂದೂ, ಲಕ್ಷ್ಮಣನನ್ನು

ಮುರ್ಥಕನೆಂದೂ, ಸೀತೆಯನ್ನು ಸಿಂತೆಯೆಂದೂ, ಜನಕನನ್ನು ಕಾಲಸೇಂದೂ, ಜಟಾಯುವನ್ನು ಜಿಂತಯನೆಂದೂ, ವ್ಯವಹರಿಸುವುದು ಸ್ವಾರಸ್ಯವಾಗಿದೆ. ಇಲ್ಲಿನ ಹನುಮಂತ (ಅನುಮಾನ್) ರಾಮ-ಸೀತೆಯರ ಮಗನೇ! ಒಮ್ಮೆ ಸೀತಾ-ರಾಮರು ಕಪಿರೂಪಗಳನ್ನು ಧರಿಸಿ ವಿಹರಿಸುತ್ತಿದ್ದರಂತೆ ಆಗ ಅವರ ಸಂಸರ್ಗದ ಸಂತಾನವಾಗಿ ಹನುಮಂತ ಬಂದನಂತೆ! ಹೀಗೆಯೇ ಅಡ್ಡಾದಿಡ್ಡಿಯಾಗಿ ರಾಮನ ಕಥೆ ಮುಂದುವರಿದು ಲಂಕಾಪ್ರವೇಶದ ಘಟ್ಟವನ್ನು ಮುಟ್ಟಿದೊಡನೆ ಹೇಗೋ ತಟ್ಟನೆ ಮಹಾಭಾರತದ ಕಥೆ ಒದಗಿಬಂದು ಮುಂದೆ ಎಪ್ಪತ್ತನೆಯ ಪರಿಚ್ಛೇದದವರೆಗೂ ಮಹಾಭಾರತದ ಕಥೆಯೇ ಕಾಣಿಸಿಕೊಳ್ಳುತ್ತದೆ.

ರಾವಣನ ವಧೆಯಾದನಂತರ ಸೀತಾಪರಿತ್ಯಾಗದ ಪ್ರಸಂಗ ಬರುತ್ತದೆ. ರಾವಣನ ಚಿತ್ರವನ್ನು ಮೂಡಿಸಿದ್ದ ಬೀಸಣಿಗೆಯೊಂದು ಸೀತೆಯ ವಶದಲ್ಲಿದ್ದಿತೆಂದೂ ಅದರಿಂದ ಸೀತೆಯ ಚಾರಿತ್ರ್ಯದ ಬಗ್ಗೆ ಸಂಶಯಗ್ರಸ್ತನಾದ ರಾಮನು ಸೀತೆಯನ್ನು ಕಾಡಿಗಟ್ಟಿದನೆಂದೂ ಇಲ್ಲಿ ಬರುವ ವಿವರ. ಮುಂದೆ ಸೀತಾರಾಮರ ಪುನರ್ಮಿಲನ ಕಾಲಮಹರ್ಷಿಯ ಆಶ್ರಮದಲ್ಲಿ ನಡೆಯುತ್ತದೆ. ರಾವಣನ ಚಿತ್ರವನ್ನು ಬೀಸಣಿಗೆಯ ಮೇಲೆ ಬಿಡಿಸಿದವಳು ಸೀತೆಯೇ; ಹಾಗೆ ಬಿಡಿಸಲು ಕಾರಣಳಾದವಳು ಕೈಕೇಯಿ. ಇಲ್ಲಿನ ಕೈಕೇಯಿ ರಾಮನ ಮಲತಾಯಿಯಲ್ಲ, ತಂಗಿ; ಮುಂದೆ ಆಕೆ ವಿಭೀಷಣನ ಮಡದಿಯಾಗುತ್ತಾಳೆ. ರಾಮನ ಮಗ ಲವಕುಮಾರನು ಮದುವೆಯಾಗುವುದು ರಾವಣನ ಮೊಮ್ಮಗಳನ್ನು (ಇಂದ್ರಜಿತ್ತುವಿನ ಮಗಳನ್ನು). ಇಂಥ ವಿಚಿತ್ರವಾದ ನೂರಾರು ವಿವರಗಳು ಈ ಗ್ರಂಥದಲ್ಲಿ ಉಪಲಬ್ಧವಿವೆ.

ಮಲಯಾ ದೇಶದ ಉತ್ತರ ದಿಗ್ಭಾಗದಿಂದ ಕ್ರಿಸ್ತಾಬ್ದ ಮೂರನೆಯ ಶತಮಾನದ ಸುಮಾರಿಗೆ ಕೌಂಡಿನ್ಯನೆಂಬ ಬ್ರಾಹ್ಮಣನು ಸಮುದ್ರಮಾರ್ಗವಾಗಿ ಕಂಬೋಡಿಯ ದೇಶವನ್ನು ಸೇರಿದಂತೆ ತಿಳಿದುಬರುತ್ತದೆ. ಭಾರತೀಯರು

ಈ ಪ್ರದೇಶವನ್ನು ಕಂಬುಜವೆಂದೂ, ಚೀನೀಯರು ಪುನಾನ್ ಎಂದೂ ಕರೆಯುತ್ತಿದ್ದರು. ಕೌಂಡಿನ್ಯರು ಇಲ್ಲಿಗೆ ಬಂದು ಬ್ರಾಹ್ಮಣ ಅರಸೊತ್ತಿಗೆಯೊಂದನ್ನು ಸ್ಥಾಪಿಸಿದನೆಂದು ಹೇಳುತ್ತಾರೆ. ಶೈವ ಪಕ್ಷಪಾತಿಗಳಾದ ಈ ಅರಸರು ವೈಷ್ಣವ ಧರ್ಮವನ್ನೂ, ಬೌದ್ಧ ಧರ್ಮವನ್ನೂ ರಕ್ಷಿಸಿದರು. ಚೀನೀ ಬೌದ್ಧ ಧರ್ಮವನ್ನು ರೂಪಿಸಿದ ಭಿಕ್ಷುಗಳು ಇಲ್ಲಿಂದ ಹೋದವರೇ. ಅಂತೂ ಕೌಂಡಿನ್ಯ ಪರಂಪರೆಯಲ್ಲಿ ಬಂದ ಜಯವರ್ಮನೆಂಬ ರಾಜನು (968 - 1001) ಬಪು ಆನ್ (ಹೇಮ ಶೃಂಗಗಿರಿ) ಎಂಬಲ್ಲಿ ದೇವಾಲಯವೊಂದನ್ನು ಕಟ್ಟಿಸಿ, ಅದರ ಗೋಡೆಗಳ ಮೇಲೆ ರಾಮಾಯಣದ ಪ್ರಸಂಗಗಳನ್ನು ಅಧಿಕರಿಸಿದ ಶಿಲ್ಪಗಳನ್ನು ಕಡೆಸಿದನು. ರಾಮಲಕ್ಷ್ಮಣರ ವನಗಮನ, ಸುಗ್ರೀವ ಸಮಾಗಮ, ವಾಲಿ ಸುಗ್ರೀವರ ಸಮರ, ಅಶೋಕವನಿಕೆಯಲ್ಲಿ ಸೀತೆ, ಸಿಂಹಾರೂಢನಾದ ದಶಕಂಠ, ಹನುಮಂತನ ಬೆನ್ನೇರಿ ಯುದ್ಧ ಸನ್ನದ್ಧನಾದ ರಾಮ, ಸೀತಾರಾಮರ ಪಟ್ಟಾಭಿಷೇಕ ಮುಂತಾದ ಪ್ರಸಂಗಗಳೆಲ್ಲ ಸ್ವಾರಸ್ಯವಾಗಿ ಶಿಲೆಯಲ್ಲಿ ನಿರೂಪಿತವಾಗಿವೆ. ಹನ್ನೆರಡನೆಯ ಶತಮಾನದಲ್ಲಿ ಇಮ್ಮಡಿ ಸೂರ್ಯವರ್ಮನೆಂಬ ಕಂಬುಜರಾಜನು ಅಂಕೋರ್ ವಾಟದಲ್ಲಿ ತನಗಾಗಿ ಸಮಾಧಿಮಂದಿರವೊಂದನ್ನು ಕಟ್ಟಿಸಿದನು. ವಿಶ್ವದಲ್ಲೇ ಅತಿ ವಿಶಾಲವಾದ ದೇವಮಂದಿರವೆಂದು ವಿಖ್ಯಾತವಾದ ಈ ಅಂಕೋರ್ ವಾಟವಲ್ಲಿ ರಾಮಾಯಣದ ಕಥೆ ಭವ್ಯವಾದ ಭಿತ್ತಿ ಶಿಲ್ಪಗಳಲ್ಲಿ ಮೂಡಿಬಂದಿದೆ. ಪರಮವಿಷ್ಣುವೇ ರಾಮನ ರೂಪದಲ್ಲಿ ಪ್ರಮುಖದೇವತೆಯೆಂಬ ಕಲ್ಪನೆ ಇಲ್ಲಿ ಕಾಣುತ್ತದೆ.

ಕಂಬೋಡಿಯಕ್ಕೆ ಹೊಂದಿಕೊಂಡಿರುವ ಸಯಾಂ (ಥಾಯ್‌ಲ್ಯಾಂಡ್) ದೇಶದಲ್ಲಿಯೂ ಅರಸನು ರಾಮನ ಅವತಾರವೆಂದೇ ಪ್ರತೀತಿ. 1350ರಂದು ಪಟ್ಟವೇರಿದ ಅರಸು ರಮಾಧಿಪತಿಯೆಂಬುವನು ತನ್ನ ರಾಜಧಾನಿಗೆ ಅಯೋಧ್ಯೆಯೆಂದೇ ಹೆಸರಿಟ್ಟನು. ಇಂದು ನಾಮಾವಶೇಷವಾಗಿರುವ ಈ

ಊರು ಈಗಿನ ಬಾಂಗ್‌ಕಾಕ್‌ನ ಬಳಿಯಿದ್ದಿತು. ರಾಜಧಾನಿ ಅಯೋಧ್ಯೆಯಿಂದ ಬಾಂಗ್‌ಕಾಕ್‌ಗೇ ಹೋದಂದು ಕಟ್ಟಿಸಿದ ಅರಮನೆಗಳಲ್ಲಿ ರಾಮಾಯಣದ ದೃಶ್ಯಗಳನ್ನು ಭಿತ್ತಿಚಿತ್ರಗಳಲ್ಲಿ ಮೂಡಿಸಿದರು. ಬಾಂಗ್‌ಕಾಕ್‌ನಲ್ಲಿರುವ ವಾಟ್ ಚತು ಫೋನ್ ಎಂಬ ಬೌದ್ಧವಿಹಾರದ ದ್ವಾರಗಳ ಮೇಲೆ ಬೆಳ್ಳಿಯ ತಗಡಿನಲ್ಲಿ ರಾಮನ ಕಥೆಯನ್ನು ಬಿಡಿಸಿದ್ದಾರೆ.

ಕ್ರಿಸ್ತಾಬ್ದದ ಎರಡನೆಯ ಶತಮಾನದ ಸುಮಾರಿಗೇ ಇಂಡೋಚೀನದಲ್ಲೂ ಭಾರತೀಯ ಸಂಸ್ಕೃತಿ ಬೆಳೆಯಲಾರಂಭಿಸಿತು. ಇಲ್ಲಿಯೂ ಮೊದಲಿನಿಂದ ರಾಮಾಯಣವು ಪ್ರಚಲಿತವಾಗಿದ್ದಿತು. ಶಾಸನಗಳಲ್ಲಿ, ಶಿಲ್ಪದಲ್ಲಿ, ವಾಸ್ತುವಿನಲ್ಲಿ ರಾಮನ ಕಥೆಯನ್ನು ನಿಲ್ಲಿಸುವ ಸಂಪ್ರದಾಯ ಇಲ್ಲಿ ಪ್ರಾಚೀನವಾದುದು. ಕ್ರಿಸ್ತಾಬ್ದ 600ರ ಶಾಸನವೊಂದರಲ್ಲಿ ಸೋಮಶರ್ಮನೆಂಬಾತನು ಕಂಬುಜದ ದೇವಾಲಯವೊಂದಕ್ಕೆ ರಾಮಾಯಣವನ್ನು ದಾನಮಾಡಿ ದಿನಂಪ್ರತಿ ಅದರ ಪಾರಾಯಣದ ವ್ಯವಸ್ಥೆಯನ್ನು ಮಾಡಿದ ಉಲ್ಲೇಖವಿದೆ. ಹಿಂದಿನ ಚಂಪರಾಜ್ಯದಲ್ಲಿ ತ್ರಾಕಿಎನ್ ಎಂಬೆಡೆ ಪ್ರಕಾಶಧರ್ಮನೆಂಬ ರಾಜನು (653-679) ವಾಲ್ಮೀಕಿಗೆಂದೇ ಒಂದು ದೇವಾಲಯವನ್ನು ಕಟ್ಟಿಸಿದ್ದನಂತೆ. ಅಲ್ಲಿನ ಶಾಸನದಲ್ಲಿ "ಕವೇರಾದ್ಯಸ್ಯ ವಾಲ್ಮೀಕಿ... ಪೂಜಾಸ್ಥಾನಂ" ಎನ್ನುವ ಮಾತು ಮೂಡಿಬಂದಿದೆ. ಮತ್ತು "ಯಸ್ಯ ಶೋಕಾತ್ ಸಮುತ್ಪನ್ನಂ ಶ್ಲೋಕಂ" ಎಂಬ ವಿವರಣೆಯೂ, ರಾಮನನ್ನು ಕುರಿತು "ವಿಷ್ಣೋಃ ಪುಂಸಃ ಪುರಾಣಸ್ಯ ಮಾನುಷಸ್ಯಾತ್ಮರೂಪಿಣಃ" ಎನ್ನುವ ಲಕ್ಷಣವೂ ಇದೇ ಶಾಸನದಲ್ಲಿ ಕಂಡುಬರುತ್ತದೆ.

ಅನ್ನಾಂ ದೇಶದ ಪ್ರಾಚೀನ ಐತಿಹಾಸಿಕ ಕಥನಗಳ ಸಂಗ್ರಹದಲ್ಲಿ ರಾಮಾಯಣವೊಂದು ಸೇರಿದೆ. ಇದನ್ನು ಪ್ರೊ॥ ಹ್ಯುಬರ್ ಎಂಬ ಪಂಡಿತರು 1905ರಂದು ಸಂಶೋಧಿಸಿದರು. ಈ ರಾಮಾಯಣಕ್ಕೆ "ರಾಕ್ಷಸರಾಜ"

ಎಂದು ಹೆಸರಂತೆ. ಇಲ್ಲಿ ರಾಮ, ಸೀತೆ ಎಂಬ ಹೆಸರುಗಳೇನೋ ನೇರವಾಗಿ, ಪ್ರಮುಖವಾಗಿ ಕಾಣಸಿಗುವುದಿಲ್ಲ. ಆದರೆ ಈ ಕಥೆಯಲ್ಲಿ ದಶರಥ ಇದ್ದಾನೆ, ದಶಾನನ ಬರುತ್ತಾನೆ. ದಶರಥನು ಹೊ-ತೂನ್-ಕಿನ್ಹಾ (ಎಂದರೆ ಚಂಪಾ) ಎಂಬಲ್ಲಿ ರಾಜನಾಗಿದ್ದನಂತೆ. ಅನ್ನಾಂದೇಶದ ಛಾಮ್ ಎಂಬ ಜನರು ಅಂದಿನ ಚಂಪಾವಾಸಿಗಳ ವಂಶಜರಂತೆ. ಸೀತೆಯ ಲಾವಣ್ಯಕ್ಕೆ ಮನಸೋತ ದಶಾನನು ದಶರಥನ ರಾಜ್ಯದ ಮೇಲೆ ದಾಳಿ ಮಾಡಿ ಆಕೆಯನ್ನು ಚಂಪಾರಾಜ್ಯದ ದಕ್ಷಿಣ ಭಾಗದಲ್ಲಿದ್ದ ತನ್ನ ಊರಿಗೆ ಕರೆದೊಯ್ದನಂತೆ. ಅನಂತರ ದಶರಥನ ಮಗನಾದವನು ಕಪಿಗಳ ಸೈನ್ಯವೊಂದನ್ನು ಸೇರಿಸಿ, ದಾರಿಗೆ ಅಡ್ಡಲಾಗಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿ, ದಶಾನನನ ರಾಜ್ಯವನ್ನು ಮುತ್ತಿ ಸೀತೆಯನ್ನು ಬಿಡಿಸಿಕೊಂಡು ಬಂದನಂತೆ.

ಕ್ರಿಸ್ತಾಬ್ದ 250ರ ಸುಮಾರಿಗೆ ಚೀನ ದೇಶದ ಸೋಗ್ದಿಯನ ಎಂಬ ಭಿಕ್ಷುವು ರಾಮಾಯಣವನ್ನು ಚೀನೀ ಭಾಷೆಗೆ ಪರಿವರ್ತಿಸಿದ್ದಾನೆ. ಇದು ಚೀನೀ ತ್ರಿಪಿಟಕದಲ್ಲಿ ಜಾತಕದ ರೂಪದಲ್ಲಿ ಉಳಿದುಬಂದಿದೆ. ಇಲ್ಲಿ ರಾಮ, ಸೀತೆ, ರಾವಣ ಇವರ ಹೆಸರುಗಳನ್ನು ನೇರವಾಗಿ ಹೇಳುವುದಿಲ್ಲ; ಆದರೆ ಕಥೆಯೇನೋ ರಾಮಾಯಣವೇ ಎನ್ನಲು ಅಡ್ಡಿಯಿಲ್ಲ. ರಾವಣನಿಂದ ಸೀತಾಪಹರಣವಾದದ್ದು, ಜಟಾಯುವು ರಾವಣನನ್ನು ತಡೆದದ್ದು, ಕಪಿಸೇನೆಯು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ್ದು, ಸೀತೆ ಶುದ್ಧಿಯಾದದ್ದು ಮುಂತಾದ ವಿವರಗಳೆಲ್ಲ ಇಲ್ಲಿ ಬರುತ್ತವೆ. ಆದರೆ ರಾಮನ ವನವಾಸದಲ್ಲಿ ಮಲತಾಯಿಯ ಕೈವಾಡವಿಲ್ಲ; ನೆರೆನಾಡಿನ ರಾಜನಾಗಿದ್ದ ತನ್ನ ಚಿಕ್ಕಪ್ಪನ ಆಕ್ರಮಣಪ್ರವೃತ್ತಿಗೆ ಅಂಜಿ ತಾನೇ ರಾಜ್ಯಪರಿತ್ಯಾಗ ಮಾಡಿ ಕಾಡಿಗೆ ಹೋಗುತ್ತಾನೆ. ಮೊದಲು ತನ್ನ ದೇಶವನ್ನು ದೋಚಿಕೊಳ್ಳಲು ಹವಣಿಸುತ್ತಿದ್ದ ಚಿಕ್ಕಪ್ಪನನ್ನು ಹಗರಣದಲ್ಲಿ ಹಿಮ್ಮೆಟ್ಟಿಸಲು ಇಲ್ಲಿನ ರಾಮನು ನಿರ್ಧರಿಸುತ್ತಾನೆ. ಆದರೆ ಸಮರ ಸಂಭವಿಸಿದರೆ ಅನಿವಾರ್ಯವಾಗಿ ಒದಗುವ ರಕ್ತಪಾತವು ಅವನ ಹೃದಯವನ್ನು ಹಿಂಡುತ್ತದೆ. ಹೀಗೆ ರಕ್ತಪಾತಕ್ಕೆ ಕಾರಣವಾಗುವುದಕ್ಕಿಂತ

ವನವಾಸವೇ ಲೇಸೆಂದು ನಿರ್ಧರಿಸುತ್ತಾನೆ. ಅವನು ವನವಾಸ ಮುಗಿಸಿ ಹಿಂದಿರುಗುವ ಹೊತ್ತಿಗೆ ಚಿಕ್ಕಪ್ಪನು ತೀರಿಕೊಂಡಿರುತ್ತಾನೆ. ಹೀಗೆ ನಿರಾತಂಕವಾಗಿ ಅವನ ರಾಜ್ಯಭಾರ ಮತ್ತೆ ಪ್ರಾರಂಭವಾಗುತ್ತದೆ.

ಇದೇ ಪ್ರಸಂಗವು ವಾಲಿ-ಸುಗ್ರೀವರ ಮಲ್ಲಯುದ್ಧವನ್ನು ಹೇಳುವ ಕಥಾಭಾಗದಲ್ಲಿ ಕೂಡ ಬಂದಿದೆ. ಕಥಾನಾಯಕನು ಬೋಧಿಸತ್ವನಾದುದರಿಂದ ವಾಲಿಯನ್ನು ಕೊಲ್ಲುವುದಿಲ್ಲ. ಸುಗ್ರೀವನಿಗೆ ಸಹಾಯಕನಾಗಿ ನಿಂತ ನಾಯಕ (ರಾಮ)ನನ್ನು ಕಂಡೊಡನೆ ವಾಲಿಯು ಹಿಮ್ಮೆಟ್ಟಿ ಓಡಿಹೋಗುತ್ತಾನೆ. ಇಲ್ಲಿನ ವಾಲಿಯು ಸುಗ್ರೀವನ ಸೋದರನಲ್ಲ, ಚಿಕ್ಕಪ್ಪ. ಹೀಗೆ ಕೊಲ್ಲದಿರುವುದು ಈ ಪಾಠದ ವೈಶಿಷ್ಟ್ಯ. ಇಲ್ಲಿ ಉತ್ತರಕಾಂಡದ ಕಥೆಯ ಪ್ರಸ್ತಾಪವಿಲ್ಲ.

ಈಗ ಟಿಬೆಟ್ಟಿನಾಚೆ ಇರುವ ಪೂರ್ವ ಇರಾನ್ ಪ್ರದೇಶವು ಮೊದಲಿಗೆ ಗೌಸ್ತನ ಅಥವಾ ಖೋಟಾನ್ ಎನಿಸಿಕೊಳ್ಳುತ್ತಿದ್ದಿತು. ಇದನ್ನು ಚೀನೀ ತುರ್ಕಿಸ್ಥಾನವೆಂದೂ ಕರೆಯುತ್ತಿದ್ದರು. ಅಲ್ಲಿ ಭಾರತೀಯ ಸಂಸ್ಕೃತಿಗೆ ಸಂಬಂಧಿಸಿದ ಸಾರಸ್ವತ ಅವಶೇಷಗಳಿದ್ದುದನ್ನು ಪೆಲ್ಲಿಯೋ ಮುಂತಾದ ವಿದ್ವಾಂಸರು ಹೊರತೆಗೆದಿದ್ದಾರೆ. ಅಲ್ಲಿ ಉಪಲಬ್ಧವಿದ್ದ ಪ್ರಾಚೀನ ಗ್ರಂಥಗಳನ್ನೆಲ್ಲ ಪ್ಯಾರಿಸ್ಸಿನ 'ಬಿಬ್ಲಿಯೋಥಿಕ್ ನ್ಯಾಷನೆಲ್' ಎಂಬ ಗ್ರಂಥಾಲಯದಲ್ಲಿ ನಿಕ್ಷೇಪ ಮಾಡಿದ್ದಾರೆ. ಈ ಗ್ರಂಥಗಳಲ್ಲಿ ರಾಮಾಯಣದ ಕಥೆಯನ್ನು ಹೇಳುವ ಮೂರು ಪ್ರಾಚೀನ ಪತ್ರಸುರುಳಿಗಳು ಸೇರಿವೆ. ಕೇಂಬ್ರಿಜ್ ವಿಶ್ವವಿದ್ಯಾಲಯದ ಬೆಯ್‌ಲಿ ಎಂಬ ಪಂಡಿತರು ತುನ್ಹ - ಉ - ಅಂಗ್ ಎಂಬಲ್ಲಿ ದೊರೆತ ಈ ರಾಮಾಯಣವನ್ನು ಪರಿಶೋಧಿಸಿ ಪ್ರಕಟಿಸಲು ಪ್ರಯತ್ನಪಟ್ಟಿದ್ದಾರೆ. ಈ ಕಾವ್ಯಗ್ರಂಥದ ಭಾಷೆ ಖೋಟಾನೀಸ್. ನಮಗೆ ಪರಿಚಯವಿರುವ ವಾಲ್ಮೀಕಿರಾಮಾಯಣದ ಜಾಡನ್ನು ಸ್ಥೂಲವಾಗಿ ಹಿಡಿದರೂ ಈ ಕಥೆಯಲ್ಲಿ ಅಸಾಧಾರಣವಾದ ವಿವರಗಳು ಹಲವಾರು ಇವೆ. ಈ ಗ್ರಂಥ ಸಿದ್ಧವಾದದ್ದು ಸುಮಾರು ಒಂದು ಸಾವಿರ ವರ್ಷಗಳಷ್ಟು ಹಿಂದೆ ಎನ್ನಬಹುದು.

ಈ ಕಥೆಯಲ್ಲಿ ದಶರಥನ ಪಾಲಿಗೆ ಸಹಸ್ರಬಾಹುಕಾರ್ತ-ವೀರ್ಯಾರ್ಜುನನು ಜಮದಗ್ನಿಋಷಿಗೆ ಮಾಡಿದ ಅಪಚಾರದ ವೃತ್ತಾಂತವನ್ನು ಜೋಡಿಸಿದ್ದಾರೆ; ದಶರಥನಿಗೆ ಸಹಸ್ರಬಾಹುವೆಂಬ ಹೆಸರನ್ನೂ ಹೇಳಿದ್ದಾರೆ. ಅವನ ಅಪಚಾರಕ್ಕೆ ಪಾತ್ರನಾದ ಬ್ರಾಹ್ಮಣನ ಮಗನನ್ನು ಪರಶುರಾಮನೆಂದೂ ಕರೆದಿದ್ದಾರೆ. ಪರಶುರಾಮನು ಕ್ಷತ್ರಿಯರನ್ನು ಧ್ವಂಸ ಮಾಡಿದುದೂ ಇಲ್ಲಿ ಬರುತ್ತದೆ. ಆದರೆ ಪರಶುರಾಮನ ಕೋಪಕ್ಕೆ ಅಂಜಿ ದಶರಥನ ಮಕ್ಕಳಾದ ರಾಮ-ಲಕ್ಷ್ಮಣರನ್ನು ಹನ್ನೆರಡು ವರ್ಷ ನೆಲಮಾಳಿಗೆಯಲ್ಲಿ ಅಡಗಿಸಿಟ್ಟಿದ್ದನೆಂದು ಇಲ್ಲಿ ಬರುವ ವಿವರ ನಮ್ಮಲ್ಲಿಲ್ಲವಷ್ಟೆ. ಸೀತೆಯು ದಶಗ್ರೀವ (ರಾವಣ)ನ ಮಗಳೆಂದು ಇಲ್ಲಿಯ ವಿವರ. ಮುಂದೆ ರಾವಣನೇ ಅವಳನ್ನು ಕಂಡು ಮೋಹಿಸುತ್ತಾನೆ. ಮಗಳನ್ನೇ ಮೋಹಿಸಿದ ಪಾಪವು ಅವನನ್ನು ದುರ್ಗತಿಗೆ ಎಳೆಯುತ್ತದೆ. ಈ ವಿವರವು ನಮ್ಮ ದೇಶದಲ್ಲಿಯೂ ಅಲ್ಲಲ್ಲಿ ಪ್ರಚಲಿತವಾಗಿದೆ. ಜೈನ ರಾಮಾಯಣಗಳಲ್ಲಿ ಕೂಡ ಇದೇ [illegible]ರವಿರುವುದು ಕಾಣಸಿಗುತ್ತದೆ. ರಾಮನು ಸೀತೆಯನ್ನು ವರಿಸುವುದೂ ಇಲ್ಲಿ ಮೋಹದಿಂದಲೇ; ಸ್ವಯಂವರ ಅಥವಾ ಧನುರ್ಭಂಗದ ಪ್ರಸ್ತಾಪವಿಲ್ಲ. ಕಾಡಿನಲ್ಲಿ ರಾಮ-ಲಕ್ಷ್ಮಣರು ಅಡ್ಡಾಡುತ್ತಿದ್ದಾಗ ಈ ಋಷಿಕನ್ಯೆಯನ್ನು ಕಂಡು ಮೋಹಿಸಿ ಅವಳನ್ನು ಒಲಿಸಿಕೊಂಡು ತಮ್ಮ ರಾಜ್ಯಕ್ಕೆ ಕರೆದೊಯ್ಯುತ್ತಾರಷ್ಟೆ. ಇಲ್ಲಿನ ಪಾಠದಲ್ಲಿ ಸುಗ್ರೀವನೊಂದಿಗೆ ಮಲ್ಲಯುದ್ಧ ಮಾಡುತ್ತಿದ್ದ ಸೋದರ ಕಪಿ ವಾಲಿಯಲ್ಲ; ನಂದ. ಮುಂದೆ ನಂದನೇ ಸೀತಾಪರಿಮಾರ್ಗಣದಲ್ಲಿ ರಾಮನಿಗೆ ನೆರವಾಗುವುದು; ಇಲ್ಲಿ ಹನುಮಂತನ ಪ್ರಸ್ತಾಪ ಬರುವುದಿಲ್ಲ.

ಇಲ್ಲಿ, ಸೀತೆಯ ಸುಳಿವನ್ನು ಕಪಿಗಳು ಕಂಡುಕೊಂಡ ಬಗೆ ಸ್ವಾರಸ್ಯವಾಗಿದೆ. ನಂದನು ತನ್ನ ಪರಿವಾರವನ್ನೆಲ್ಲ ಕರೆದು ಮುಂದಿನ ಏಳು ದಿನಗಳಲ್ಲಿ ಸೀತೆಯು ಇರುವ ಸ್ಥಳವನ್ನು ಪತ್ತೆ ಮಾಡಬೇಕೆಂದೂ, ತಪ್ಪಿದರೆ ಎಲ್ಲರ ಕಣ್ಣುಗಳನ್ನು ಕೀಳಿಸುವೆನೆಂದೂ ವಿಧಿಸುತ್ತಾನೆ. ಕಪಿಗಳ ಪಡೆ ಎಡೆಬಿಡದೆ ಏಳೂ ದಿನ ಹುಡುಕಿದರೂ ಸೀತೆಯ ಸುಳಿವು ಸಿಗಲಿಲ್ಲ. ಆದರೆ ಏಳನೆಯ ದಿನ ಲಘೂಷಳೆಂಬ ಹೆಣ್ಣು ಕಪಿ ಮರದ ಮೇಲೆ

ಕೂತಿದ್ದಾಗ ಪಕ್ಕದಲ್ಲಿ ಎಲೆಗಳ ಸಂದಿನಿಂದ ಹಕ್ಕಿಯೊಂದು ತನ್ನ ಮರಿ "ಮಗು, ನಾಳೆ ನಿನಗೆ ಬೇಕಾದಷ್ಟು ಕಪಿಗಳ ಕಣ್ಣುಗಳನ್ನು ತಿನ್ನ ತಂದುಕೊಡುತ್ತೇನೆ. ಹೇಗೂ ಅವಕ್ಕೆ ಸೀತೆ ಲಂಕಾಪುರದಲ್ಲಿರುವಳೆಂ ಸುದ್ದಿ ತಿಳಿಯುವುದಿಲ್ಲ" ಎಂದು ಹೇಳುತ್ತಿದ್ದುದನ್ನು ಕೇಳಿತು. ಬೇರೊಂ ಕಪಿಯು ಲಘೂಷಳಿಂದ ಈ ಸುದ್ದಿಯನ್ನು ಸಂಗ್ರಹಿಸಿ ಒಡೆಯನಾ ನಂದನಿಗೆ ಮುಟ್ಟಿಸಿತು.

ಸೀತಾಪರಿತ್ಯಾಗದ ವಿಚಾರ ಇಲ್ಲಿ ಬೇರೊಂದು ತೆರನಾ ಬಂದಿದೆ. ರಾಮ - ಲಕ್ಷ್ಮಣರು ಸೀತೆಯನ್ನು ಪಡೆದು ಹಿಂದಿರುಗಿ ಮೇಲೆ ನೂರು ವರ್ಷವಾದರೂ ಅವರಿಗಾಗಲೀ ಪ್ರಜೆಗಳಿಗಾಗಲಿ ಸಮಾಧಾನವಿರಲಿಲ್ಲ. ತನ್ನ ಶೀಲದ ವಿಚಾರವಾಗಿ ಶಂಕೆಯು ಎಲ್ಲ ಮನಸ್ಸನ್ನೂ ಕದಡಿದ್ದುದನ್ನು ಸೀತೆಯೇ ಅರಿತು, ಇದನ್ನು ರಾಮಲಕ್ಷ್ಮಣರಿ ಹೇಳಿ ಭೂಮಿಯೊಳಗಿಳಿದು ಮರೆಯಾದಳು. ಸೀತೆಗೆ ರಾಮನೊಬ್ಬನೆ ಗಂಡನೆಂದು ಇಲ್ಲಿ ಸ್ಪಷ್ಟವಾಗಿಲ್ಲ; ಮೊದಲಿನಿಂದಲೂ ರಾಮಲಕ್ಷ್ಮಣರಿಬ್ಬರು ಅವಳಲ್ಲಿ ಅನುರಕ್ತರು. ದಶರಥನಿಗೂ ಇಲ್ಲಿ ರಾಮ-ಲಕ್ಷ್ಮಣರಿಬ್ಬರೇ ಮಕ್ಕಳ ರಾಮ-ರಾವಣರ ಯುದ್ಧದಲ್ಲಿ ರಾವಣ ಮಡಿಯುವುದಿಲ್ಲ; ಪರಾಜಿತನಾ ರಾಮನ ಕ್ಷಮೆಯನ್ನು ಪಡೆದು ಉಳಿದುಕೊಳ್ಳುತ್ತಾನೆ.

ಪೂರ್ವ ಇರಾನಿನ ಈ ಕಥೆಯಲ್ಲಿ ಬೌದ್ಧಧರ್ಮದ ಪ್ರಭಾ ಸ್ಪಷ್ಟವಾಗಿದೆ. ಗ್ರಂಥಾರಂಭದಲ್ಲೂ ಸಮಾಪ್ತಿಯಲ್ಲೂ ಬೌದ್ಧಧರ್ಮ ಹೆಗ್ಗಳಿಕೆಯ ಉಲ್ಲೇಖವಿದೆ. ಕಥೆ ಮುಗಿದಮೇಲೆ ಜಾತಕಕಥೆಗಳಲ್ಲಿರುವಂ ಪಾತ್ರಪರಿಚಯವಿದೆ. ಇಲ್ಲಿಯ ರಾಮನು ಶಾಕ್ಯಮುನಿ-ಬುದ್ಧನೇ; ಮೈತ್ರೇಯನೆ ಲಕ್ಷ್ಮಣ. ದಶಗ್ರೀವನು ಸೋತನಂತರ ರಾಮನ ಬಳಿಗೆ ಬಂದು ಧರ್ಮದೀ ಪಡೆಯುತ್ತಾನೆ. ಅವನನ್ನು ಕೊಲ್ಲದೆ ಉಳಿಸಿ ಅವನ ಶೀಲದಲ್ಲಿ ಪರಿವರ್ತನೆಯನ್ನು ಒದಗಿಸಿದುದು ಬುದ್ಧನ ಕಾರುಣ್ಯಪಾರಮಿತೆಯನ ಸೂಚಿಸುತ್ತದೆ.

ಈ ಕಥೆಯಲ್ಲಿ ಜರುಗುವ ಪ್ರಸಂಗಗಳು ಜಟಿಲವಾಗಿಲ್ಲದೆ ಸರಳವಾಗಿರುವುದು ಅದರ ಪ್ರಾಚೀನತೆಯನ್ನು ಹೇಳುತ್ತದೆ. ನಿರೂಪಣೆಯಲ್ಲಿ ಕೂಡ ಅನವಶ್ಯವಾದ ಅಲಂಕರಣದ ಆವೇಶವಿಲ್ಲ. ಜಾನಪದ ಕವನದಂತೆ ಹೆಣೆಯಲ್ಪಟ್ಟಿರುವ ಈ ಕಥೆಯು ವಾಲ್ಮೀಕಿರಾಮಾಯಣದಿಂದ ಎಷ್ಟರಮಟ್ಟಿಗೆ ಪ್ರಭಾವಿತವಾಗಿದೆಯೆಂದು ನಿರ್ಧರಿಸುವುದು ಕಷ್ಟ. ಬಹುಶಃ ವಾಲ್ಮೀಕಿಯ ಕಾವ್ಯಕ್ಕಿಂತ ಪ್ರಾಚೀನವಾದ ಸಂಪ್ರದಾಯವೊಂದನ್ನವಲಂಬಿಸಿ ಈ ಕಥೆ ಸಿದ್ಧವಾಗಿರಬಹುದು.

ಹೀಗೆ ನೆರೆನಾಡುಗಳಲ್ಲಿ ರಾಮಾಯಣವು ಪ್ರಚಲಿತವಾಗಿರುವುದು ಮಾತ್ರವಲ್ಲ, ವಿವರಗಳಲ್ಲಿ ವಿಪುಲವಾದ ವೈವಿಧ್ಯವೂ ಉಳಿದುಬಂದಿದೆ. ರಾಮನ ಕತೆಯ ಪ್ರಾಚೀನತೆಯ ಬಗ್ಗೆ, ವಾಲ್ಮೀಕಿಯ ಕಾಲಕ್ಕೆ ಸಿದ್ಧವಾಗಿದ್ದ ಸಂಪ್ರದಾಯ ಬೆಳೆದುಬಂದುದರ ಬಗ್ಗೆ ಈ ದೇಶಾಂತರಗಳ ರಾಮಾಯಣ ಪಾಠಗಳು ಬೆಳಕು ಚೆಲ್ಲಬಹುದು.



ರಾಮಾಯಣದ ರಚನೆಗೆ ನಾರದರಿಂದ ಸಾಮಗ್ರಿಯನ್ನು ವಾಲ್ಮೀಕಿಯು ಪಡೆದುಕೊಂಡನು

# ಸಂಸ್ಕೃತ - ಸಂಸ್ಕೃತಿ - ಸಂಪತ್ತು

ಸಂಸ್ಕೃತ - ಸಂಸ್ಕೃತಿ - ಸಂಪತ್ತು ಮಾಲೆಯ ಮೊದಲ ಹೂವಾಗಿ ಆದಿಕವಿ ವಾಲ್ಮೀಕಿಯನ್ನು ಕುರಿತಂತೆ ಒಂದು ಹೊತ್ತಗೆ ಬರುತ್ತಿದೆ. ಮುಂದೆ ಬರಲಿರುವುದು ವಾಲ್ಮೀಕಿಯ ನಂತರ, ಕಾಳಿದಾಸನಿಗೆ ಮೊದಲು, ಮಹಾಕವಿಯಾಗಿ ಮೆರೆದ ಅಶ್ವಘೋಷನ ಸೌಂದರನಂದ ಕಾವ್ಯವನ್ನು ಕುರಿತದ್ದು; ಅವನದ್ದೆ ಇನ್ನೊಂದು ಮಹಾಕಾವ್ಯವಾದ ಬುದ್ಧಚರಿತವನ್ನೂ ಪರಿಚಯಮಾಡಿಕೊಡಲಾಗುತ್ತದೆ. ಅನಂತರ ಜಯದೇವಕವಿಯ ಗೀತಗೋವಿಂದವನ್ನು ಕುರಿತು, ಭಾಸನ ನಾಟಕಗಳನ್ನು ಕುರಿತು, ಭರತಮುನಿಯ ನಾಟ್ಯಶಾಸ್ತ್ರವನ್ನು ಕುರಿತು, ಅಲಂಕಾರ ಶಾಸ್ತ್ರದ ವಿವಿಧ ಪ್ರಸ್ಥಾನಗಳನ್ನು ಕುರಿತು, ಭರ್ತೃಹರಿಯ ವಾಕ್ಯಪದೀಯವನ್ನು ಕುರಿತು, ದಿಙ್ನಾಗನ ಕುಂದಮಾಲೆಯನ್ನು ಕುರಿತು, ಕುಮಾರದಾಸನ ಜಾನಕೀಹರಣವನ್ನು ಕುರಿತು, ತಂತ್ರಶಾಸ್ತ್ರವನ್ನು ಕುರಿತು, ಹೀಗೆ ಮಾಲೆ ಮುಂದುವರಿಯುತ್ತದೆ............




ಪ್ರತಿಗಳಿಗೆ ಸಂಪರ್ಕಿಸಬೇಕಾದ ವಿಳಾಸ :
ಪುಸ್ತಕ ಭಾರತಿ, ಭಾರತೀಯ ವಿದ್ಯಾಭವನ
ರೇಸ್ ಕೋರ್ಸ್ ರಸ್ತೆ, ಬೆಂಗಳೂರು-560 001.

ಬೆಲೆ ರೂ. 25/-